# ಜೈನ ಬಾಲಬೋಧೆ

೨ ನೆಯ ಭಾಗ.

ಬೆಲೆ:–೪ ಆಣೆಗಳು.

# ಜೈನ ಬಾಲಬೋಧೆ.

## ೨ನೆಯ ಭಾಗ.



**श्री. रुखमाबाई भ्र. कृष्णप्पा गुघरी रा० तेरदाळ**
**यांनी ज्ञानावर्णीय कर्मक्षयार्थ**
**या पुस्तकाच्या ११५ प्रती दान केल्या आहेत.**

ಶ್ರೀಮಹಾವೀರ ನಿ. ಶಕೆ ೨೪೪೮.



ಶಕೆ ೧೮೪೩.



ಬೆಲೆ:—೪ ಆಣೆಗಳು.

# ಮುನ್ನುಡಿ.

ಕನ್ನಡದಲ್ಲಿ ಜೈನಾಚಾರ್ಯ ಮತ್ತು ಕವಿಗಳಿಂದ ರಚಿತವಾದ ಹಲವು ಉದ್ಗ್ರಂಥಗಳಿರುತ್ತವೆ. ಅವುಗಳ ಭಾಷೆಯು ಮತ್ತು ವಿಷಯನಿರೂಪಣಶೈಲಿಯು ಚಿಕ್ಕ ಮಕ್ಕಳಿಗೆ ಸಹಜವಾಗಿ ತಿಳಿಯುವಷ್ಟು ಸುಲಭವಿಲ್ಲ. ಚಿಕ್ಕ ಮಕ್ಕಳಿಗೆ ಧಾರ್ಮಿಕಜ್ಞಾನವನ್ನು ಸುಲಭಶಬ್ದಗಳಲ್ಲಿ ಮಾಡಿಕೊಡುವ ಪುಟ್ಟ ಗ್ರಂಥಗಳು ಕನ್ನಡದಲ್ಲಿ ವಿರಳ. ಇಂಥ ಪುಸ್ತಕಗಳ ಅಭಾವದ ಮೂಲಕ ಧಾರ್ಮಿಕಜ್ಞಾನವು ಪಸರಿಸದೆ ಇರುವದನ್ನು ನೋಡಿ ವಿಷಾದವೆನಿಸುತ್ತದೆ.

ಚಿಕ್ಕಂದಿನಿಂದ ಬಾಲ-ಬಾಲಿಕೆಯರಿಗೆ ಜೈನಧರ್ಮಶಿಕ್ಷಣವು ದೊರೆಯಬೇಕೆಂದೂ, ಜೈನ ಆಚಾರ-ವಿಚಾರಗಳ ಪರಿಚಯವಾಗಬೇಕೆಂದೂ ಮರಾಠೀ ಭಾಷೆಯಲ್ಲಿ ಜೈನಬಾಲಬೋಧವೆಂಬ ಹೊತ್ತಿಗೆಯನ್ನು ನಾವು ಬರೆದೆವು. ಚಿತ್ರಗಳಿಂದ ಶೋಭಿತವಾದ ಈ ಚಿಕ್ಕ ಪುಸ್ತಕವು ಚಿಕ್ಕ ಮಕ್ಕಳ ಪ್ರೀತಿಗೆ ತೀವ್ರ ಪಾತ್ರವಾದದ್ದನ್ನು ಕಂಡು ನಮಗೆ ಆನಂದವಾಯಿತು.

ಜೈನ ಸಂಸ್ಕೃತಿಯ ನೆಲೆವನೆಯಾದ ಕನ್ನಡನಾಡಿನಲ್ಲಿಯೂ ಈ ಪುಸ್ತಕದ ಪ್ರಚಾರವಾಗಬೇಕೆಂದು ಬಯಿಸಿ ನಮ್ಮ ಮರಾಠೀ ಪುಸ್ತಕದ ಭಾಷಾಂತರವನ್ನು ಮಾಡಿಸಲು ಹವಣಿಸಿದೆವು. ತುಸು ದಿನಗಳಲ್ಲಿಯೇ ಮ. ರಾ. ರಾ. ವಿಜಾಪುರ ಕಲ್ಯಾಣರಾಯರು ಮತ್ತು ಶೇಡಬಾಳ ಭಾಸ್ಕರರಾಯರು ಒಳ್ಳೇ ತತ್ಪರತೆಯಿಂದ ಅದರ ಕನ್ನಡ ಅನುವಾದವನ್ನು ಬರೆದುಕೊಟ್ಟರು; ಮತ್ತು ಸ್ಥಲೋಚಿತ ಕನ್ನಡ ಪದ್ಯಗಳನ್ನೂ ಹಾಕಿಕೊಟ್ಟರು ಈ ಕಾರ್ಯದ ದೆಶೆಯಿಂದ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ.

ಜೈನ ವಿದ್ಯಾರ್ಥಿಗಳಲ್ಲಿ ಧಾರ್ಮಿಕಜ್ಞಾನವು ಪಸರಿಸಬೇಕಾದರೆ ಬಾಲ್ಯಾವಸ್ಥೆಯಿಂದಲೇ ಅವರಿಗೆ ಧರ್ಮಗ್ರಂಥಗಳನ್ನು ಓದುವ ರುಚಿ ಹಚ್ಚಬೇಕು. ಕನ್ನಡನಾಡಿನವರು ಈ ಚಿಕ್ಕ ಪುಸ್ತಕವನ್ನು ತಮ್ಮ ಬಾಲ-ಬಾಲಿಕೆಯರ ಕಡೆಯಿಂದ ನಿಯಮಿತತನದಿಂದ ಓದಿಸಿಕೊಂಡರೆ ನಾವು ಮಾಡಿದ ಪ್ರಯತ್ನವು ಸಫಲವಾಯಿತೆಂದು ತಿಳಿಯುತ್ತೇವೆ.

ಮುದ್ರಣಕಾರ್ಯವನ್ನು ಮುದ್ದಾಗಿ ಮಾಡಿಕೊಟ್ಟ ಬೆಳಗಾಂವ ಮಹಾವೀರ ಪ್ರೆಸ್ಸಿನ ಮಾಲಕರ ಮತ್ತು ಪುನಃ ನಮ್ಮ ಅನುವಾದಕರ ಆಭಾರವನು ಮನ್ನಿಸಿ ಈ ಮುನ್ನುಡಿಯನ್ನು ಮುಗಿಸುವೆವು. ತಮ್ಮ,

**ರಾವಜೀ ಸಖಾರಾಮ ದೋಸೀ ಸೊಲ್ಲಾಪೂರ.**

# ವಿಷಯಾನುಕ್ರಮಣಿಕೆ.



ಓಂ

ಶ್ರೀ ವೀತರಾಗಾಯ ನಮಃ ।

ಸಚಿತ್ರ

# ಜೈನ ಬಾಲಬೋಧೆ.

## ೨ನೆಯ ಭಾಗ.

### ೧ನೆಯ ಪಾಠ.

### ತೀರ್ಥಂಕರರೂ ಅವರ ಲಾಂಛನಗಳೂ.

ಸಂಸಾರದಲ್ಲಿರುವ ಜೀವಗಳಿಗೆ ಧರ್ಮೋಪದೇಶ ಮಾಡಿ, ಧರ್ಮದ ಉದ್ಧಾರವನ್ನು ಮಾಡುವವರಿಗೆ, 'ತೀರ್ಥಂಕರ' ಎಂಬ ಹೆಸರು. ತೀರ್ಥ ಅಂದರೆ ಧರ್ಮ.

ತೀರ್ಥಂಕರರ ಪ್ರತಿಮೆಯ ಮೇಲೆ ಲಾಂಛನಗಳಿರುತ್ತವೆ. ಲಾಂಛನವೆಂದರೆ ಗುರುತು. ತೀರ್ಥಂಕರರು ಹುಟ್ಟಿದಾಗ ಅವರ ಎಡಗಾಲಿನ ಮೇಲೆ ಇರುವ ಚಿಹ್ನದ ಮೇಲಿಂದ, ಅವರ ಲಾಂಛನವನ್ನು ಗೊತ್ತುಮಾಡುತ್ತಾರೆ. ತೀರ್ಥಂಕರರು ಉಚ್ಚ ರಾಜಕುಲಗಳಲ್ಲಿ ಹುಟ್ಟಿರುತ್ತಾರೆ. ಅಂತೇ ಅವರ ನಿಶಾನಿಯ ಮೇಲೆ ಇದ್ದ

ಚಿಹ್ನದ ಮೇಲಿಂದಲೂ, ಅವರ ಲಾಂಛನಗಳನ್ನು ಗೊತ್ತುಮಾಡಿರುತ್ತಾರೆ. ಈಗಲೂ ಅರಸರ ನಿಶಾನಿಗಳ ಮೇಲೆ ಬೇರೆ ಬೇರೆ ಚಿಹ್ನಗಳು ಕಂಡುಬರುತ್ತವೆ. ಆ ಲಾಂಛನಗಳ ಮೇಲಿಂದ ಪ್ರತಿಮೆಯು ಯಾವ ತೀರ್ಥಂಕರರದು ಎಂಬದು ಗೊತ್ತಾಗುತ್ತದೆ. ಲಾಂಛನವಿರುವ ಪ್ರತಿಮೆಯು ತೀರ್ಥಂಕರರದೇ ಎಂದು ಗುರುತು ಹಿಡಿಯಬೇಕು. ವರ್ತಮಾನ ಕಾಲದಲ್ಲಿ ೨೪ ಜನ ತೀರ್ಥಂಕರರು ಆಗಿಹೋಗಿರುತ್ತಾರೆ. ಅವರ ಹೆಸರುಗಳನ್ನೂ ಲಾಂಛನಗೆಳನ್ನೂ ಕೆಳಗೆ ಕೊಟ್ಟಿರುತ್ತೇವೆ.

**ತೀರ್ಥಂಕರರು.**

(೧) ವೃಷಭನಾಥ
(೨) ಅಜಿತನಾಥ
(೩) ಸಂಭವನಾಥ
(೪) ಅಭಿನಂದನ
(೫) ಸುಮತಿನಾಥ
(೬) ಪದ್ಮಪ್ರಭ
(೭) ಸುಪಾರ್ಶ್ವ
(೮) ಚಂದ್ರಪ್ರಭ
(೯) ಪುಷ್ಪದಂತ
(೧೦) ಶೀತಲನಾಥ
(೧೧) ಶ್ರೇಯಾಂಸ
(೧೨) ವಾಸುಪೂಜ್ಯ
(೧೩) ವಿಮಲನಾಥ
(೧೪) ಅನಂತನಾಥ
(೧೫) ಧರ್ಮನಾಥ
(೧೬) ಶಾಂತಿನಾಥ
(೧೭) ಕುಂಥುನಾಥ
(೧೮) ಅರನಾಥ
(೧೯) ಮಲ್ಲಿನಾಥ
(೨೦) ಮುನಿಸುವ್ರತ
(೨೧) ನಮಿನಾಥ
(೨೨) ನೇಮಿನಾಥ
(೨೩) ಪಾರ್ಶ್ವನಾಥ
(೨೪) ಮಹಾವೀರ

# ಲಾಂಛನಗಳು.

೧ ವೃಷಭನಾಥರ ಲಾಂಛನ ಎತ್ತು.



೨ ಅಜಿತನಾಥರ ಲಾಂಛನ ಆನೆ.



೩ ಸಂಭವನಾಥರ ಲಾಂಛನ ಕುದುರೆ.



೪ ಅಭಿನಂದನರ ಲಾಂಛನ ಮಂಗ.



೫ ಸುಮತಿನಾಥರ ಲಾಂಛನ ಚಕ್ರವಾಕ ಪಕ್ಷಿ.



೬ ಪದ್ಮಪ್ರಭರ ಲಾಂಛನ ಕಮಲ.



೭ ಸುಪಾರ್ಶ್ವರ ಲಾಂಛನ ಸ್ವಸ್ತಿಕ.



೮ ಚಂದ್ರಪ್ರಭರ ಲಾಂಛನ ಚಂದ್ರ.



೯ ಪುಷ್ಪದಂತರ ಲಾಂಛನ ಮೊಸಳೆ.



೧೦ ಶೀತಲನಾಥರ ಲಾಂಛನ ಅಳ್ಳೀಗಿಡ.



೧೧ ಶ್ರೇಯಾಂಸರ ಲಾಂಛನ ಗಂಡಕ.



೧೨ ವಾಸುಪೂಜ್ಯರ ಲಾಂಛನ ಕೋಣ.



೧೩ ವಿಮಲನಾಥರ ಲಾಂಛನ ಕಾಡಹಂದಿ.



೧೪ ಅನಂತನಾಥರ ಲಾಂಛನ ಏದು.



೧೫ ಧರ್ಮನಾಥರ ಲಾಂಛನ ವಜ್ರ.



೧೬ ಶಾಂತಿನಾಥರ ಲಾಂಛನ ಚಿಗರೆ.



೧೭ ಕುಂಥುನಾಥರ ಲಾಂಛನ ಟಗರು.



೧೮ ಅರನಾಥರ ಲಾಂಛನ ಮೀನು.



೧೯ ಮಲ್ಲಿನಾಥರ ಲಾಂಛನ ಕುಂಭ.



೨೦ ಮುನಿಸುವ್ರತರ ಲಾಂಛನ ಆವೆ.



೨೧ ನಮಿನಾಥರ ಲಾಂಛನ ನೀಲಕಮಲ




೨೨ ನೇಮಿನಾಥರ ಲಾಂಛನ ಶಂಖ.



೨೩ ಪಾರ್ಶ್ವನಾಥರ ಲಾಂಛನ ಸರ್ಪ.



೨೪ ಮಹಾವೀರರ ಲಾಂಛನ ಸಿಂಹ.





## ೨ನೆಯ ಪಾಠ.

# ಜಿನಪ್ರತಿಮೆ.

ತೀರ್ಥಂಕರರಿಗೆ ಪೂರ್ಣಜ್ಞಾನವಾಯಿತೆಂದರೆ, ಅವರು ಅರಿಹಂತ (ಅರಹಂತ)ರಾಗುತ್ತಾರೆ. ಇವರಿಗೇ ಜಿನರೆನ್ನುತ್ತಾರೆ. ಅರಿಹಂತರಲ್ಲಿ ಯಾವ ದೋಷವೂ ಇರುವದಿಲ್ಲ.

ನಮ್ಮ ಊರಲ್ಲಿ ಒಂದು ಜಿನಮಂದಿರವು ಇದೆ. ಜಿನಮಂದಿರವೆಂದರೆ ಜಿನದೇವರ ಗುಡಿಯು. ಇದಕ್ಕೆ ಚೈತ್ಯಾಲಯವೆಂದೂ ಅನ್ನುತ್ತಾರೆ. ಬಾಲಕರೇ, ನಡೆಯಿರಿ. ನಾವು ಆ ಗುಡಿಗೆ ಹೋಗುವಾ· ಅದು ನೋಡಿರಿ, ಒಳಗುಡಿಯಲ್ಲಿ ಜಿನೇಂದ್ರನ ಪ್ರತಿಮೆಯು ಇರುವದು. ಈ ಪ್ರತಿಮೆಯು ಮಹಾವೀರ ಸ್ವಾಮಿಗಳವರದು. ಮಹಾವೀರರು ೨೪ನೇ ತೀರ್ಥಂಕರರು. ಈ ಎದುರಿಗೆ ಕಾಣುತ್ತಿರುವ ಪ್ರತಿಮೆಯು ಎಡಗಾಲಿನ ಮೇಲೆ ಬಲಗಾಲನ್ನು ಹಾಕಿಕೊಂಡು ಕುಳಿತಿರುತ್ತದೆ. ತೊಡೆಯ ನಟ್ಟನಡುವೆ, ಎಡಗೈಯ ಮೇಲೆ ಬಲಗೈಯನ್ನು ಇಟ್ಟದೆ. ನೋಟವು ಮೂಗಿನ ಕಡೆಗಿದೆ. ತೊಡೆಯ ಕೆಳಗೆ ಸಿಂಹದ ಚಿತ್ರವಿರುವದು. ಅದಕ್ಕೆ ಲಾಂಛನವೆನ್ನುತ್ತಾರೆ. ಈ ಲಾಂಛನದ ಮೇಲಿಂದ, ಇವರು ಯಾವ ತೀರ್ಥಂಕರರೆಂಬದನ್ನು ಗೊತ್ತು ಹಿಡಿಯುತ್ತೇವೆ. ಈ ಪ್ರತಿಮೆಯು ಕಲ್ಲಿನದಿದೆ. ಕಲ್ಲಿನ ಹೊರತಾಗಿ ಹಿತ್ತಾಳಿ, ಬೆಳ್ಳಿ, ಬಂಗಾರ ಮತ್ತು ಸ್ಫಟಿಕ ಇವುಗಳಿಂದ ಮಾಡಿದ ಪ್ರತಿಮೆಗಳೂ ಇರುತ್ತವೆ. ಶ್ರಾವಕರಾದ ನಾವು

ದಿನಾಲು ಚೈತ್ಯಾಲಯಕ್ಕೆ ಬಂದು ಅರಿಹಂತರ ಪ್ರತಿಮೆಗಳ ದರ್ಶನೆ ವನ್ನು ತೆಗೆದುಕೊಳ್ಳಬೇಕು. ಶಾಂತವೂ ಆನಂದಮಯವೂ ಆದ ಅವರ ಮುಖಮುದ್ರೆಯನ್ನು ನೋಡಿ, ನಾವಾದರೂ ಶಾಂತರೂ ಆನಂದಮಯರೂ ಆಗಲು ಯತ್ನಿಸಬೇಕು.



## ೩ನೆಯ ಪಾಠ.

# ಸುಗ್ರೀವರಾಜನು.

ಒಂದು ದಿನ ರಾಮಚಂದ್ರನೂ ಲಕ್ಷ್ಮಣನೂ ವಿಭೀಷಣರಾಜ ನಿಂದ ಕೂಡಿಕೊಂಡು ಊರಹೊರಗಿನ ತಮ್ಮ ಉದ್ಯಾನದಲ್ಲಿರುವ ಸಕಲಭೂಷಣ ಕೇವಲಿಯವರ ದರ್ಶನಕ್ಕಾಗಿ ಹೋಗಿದ್ದರು. ಕೇವ ಲೀಭಗವಾನರನ್ನು ಪೂಜಿಸಿದ ಬಳಿಕ ಅವರಿಂದ ಧರ್ಮೋಪದೇಶ ವನ್ನು ಕೇಳಿದರು. ಆ ಮೇಲೆ ವಿಭೀಷಣನು ರಾಮಚಂದ್ರನಿಗೆ ಪರಮ ಪ್ರಿಯನಾದ ಸುಗ್ರೀವರಾಜನ ಕಥೆಯನ್ನು ಹೇಳಬೇಕೆಂದು, ಕೇವಲೀ ಭಗವಾನರನ್ನು ಪ್ರಾರ್ಥಿಸಿದನು. ಆಗ ಅವರು ಸುಗ್ರೀವರಾಜನ ಕಥೆಯನ್ನು ಹೇಳತೊಡಗಿದರು.

ಶ್ರೇಷ್ಠಪುರ ಎಂಬ ಪಟ್ಟಣದಲ್ಲಿ ಛತ್ರಛಾಯ ಎಂಬ ರಾಜನು ರಾಜ್ಯವಾಳುತ್ತಿದ್ದನು. ಆತನ ರಾಣಿಯ ಹೆಸರು ಶ್ರೀದತ್ತೆಯು. ಇದೇ ರಾಜಧಾನಿಯಲ್ಲಿ ಪದ್ಮರುಚಿ ಎಂಬ ಶ್ರೇಷ್ಠ (ಶೇಠ) ನಿದ್ದನು. ಒಂದು ದಿವಸ ಅವನು ಜಿನಮಂದಿರದಿಂದ ಜಿನೇಶ್ವರನ ದರ್ಶನ ತೆಗೆದುಕೊಂಡು ಮರಳಿ ಮನೆಗೆ ಬರುತ್ತಿದ್ದನು. ಬೀದಿಯಲ್ಲಿ ಎರಡು

ಎತ್ತುಗಳು ಕಾದಾಡುವದನ್ನು ಅವನು ಕಂಡನು. ಒಂದು ಎತ್ತಿಗೆ ಬಹಳ ಗಾಯವಾದದ್ದರಿಂದ ಅದು ನೋಡ ನೋಡುವಷ್ಟರಲ್ಲಿ ನೆಲಕ್ಕುರುಳಿತು. ಇನ್ನು ಈ ಎತ್ತು ಸಾಯುತ್ತದೆಂದು ತಿಳಿದು ಪದ್ಮರುಚಿಯು ಆ ಎತ್ತಿನ ಕಿವಿಯಲ್ಲಿ 'ಣಮೋಕಾರ' ಮಂತ್ರವನ್ನು ನುಡಿದನು. ಮುಂದೆ ಸತ್ತ ಎತ್ತಿನ ಜೀವಾತ್ಮನು ಆ ಮಂತ್ರಪ್ರಭಾವದಿಂದ ಶ್ರೀದತ್ತೆರಾಣಿಯ ಹೊಟ್ಟೆಯಲ್ಲಿ ವೃಷಭಧ್ವಜ ಎಂಬ ಹೆಸರುಳ್ಳ ಮಗನಾಗಿ ಹುಟ್ಟಿ ಬಂದನು; ಮುಂದೆ ಅವನು ಹುಣ್ಣಿವೆಯ ಚಂದ್ರನಂತೆ ಬೆಳೆದು ರಾಜ್ಯವಾಳಹತ್ತಿದನು.

ಒಂದು ದಿವಸ ವೃಷಭಧ್ವಜರಾಜನು ಆನೆಯ ಮೇಲೆ ಕುಳಿತು ರಾಜಧಾನಿಯಲ್ಲಿ ಅಡ್ಡಾಡುತ್ತಿರುವಾಗ ಮೊದಲು ಎತ್ತು ಸತ್ತ ಸ್ಥಳಕ್ಕೆ ಬಂದನು. ಕೂಡಲೆ ಅವನು ಮೂರ್ಛೆ ಹೋದನು. ಆಗ ಅವನಿಗೆ ಜಾತಿಸ್ಮರಣವಾಯಿತು. ಅದರಿಂದ ಪೂರ್ವಜನ್ಮದ ಸಂಗತಿಯು ಅವನ ಲಕ್ಷ್ಯದಲ್ಲಿ ಬಂತು. ಬಳಿಕ ಮೂರ್ಛೆ ತಿಳಿದೆದ್ದು ಸುಮ್ಮನೆ ಮನೆಗೆ ಹೋದನು. 'ಣಮೋಕಾರ' ಮಂತ್ರವನ್ನು ನುಡಿದವನನ್ನು ಶೋಧಿಸುವದಕ್ಕಾಗಿ ಒಂದು ಹೊಸ ಜಿನಮಂದಿರವನ್ನು ಕಟ್ಟಿಸಿದನು. ಮತ್ತು ಅದರಲ್ಲಿ ಒಂದು ಬದಿಗೆ ನೆಲಕ್ಕೆ ಬಿದ್ದ ಎತ್ತಿನಮೂರ್ತಿಯನ್ನು ಸಿದ್ಧಪಡಿಸಿದನು. ಹಾಗೂ ಅದರ ಕಿವಿಯಲ್ಲಿ ಒಬ್ಬನು 'ಣಮೋಕಾರ' ಮಂತ್ರವನ್ನು ನುಡಿಯುವಂತೆ ತೋರಿಸಿದನು. ಈ ಎರಡು ಮೂರ್ತಿಗಳ ಬಳಿಯಲ್ಲಿ ಒಬ್ಬ ಚುರುಕಾದ ಮನುಷ್ಯನನ್ನು ಕೂಡ್ರಿಸಿ,

ಈ ಚಿತ್ರಗಳ ಕಡೆಗೆ ಯಾವನು ಆಶ್ಚರ್ಯದಿಂದ ನೋಡುತ್ತಾನೋ ಅವನನ್ನು ನನ್ನ ಬಳಿಗೆ ಕರಕೊಂಡು ಬರಬೇಕು ಎಂದು ಅಪ್ಪಣೆ ಮಾಡಿದನು.

ಒಂದು ದಿವಸ ಪದ್ಮರುಚಿಶ್ರೇಷ್ಠಿಯು ಆ ಮಂದಿರಕ್ಕೆ ಹೋಗಿದ್ದನು. ಅವನು ಆ ಚಿತ್ರಗಳನ್ನು ನೋಡಿ, ಬೆದರಿ ಬೆಪ್ಪಾದನು. ಆಗ ಅಲ್ಲಿ ಕಾದುಕೊಂಡಿದ್ದ ಮನುಷ್ಯನು ಪದ್ಮರುಚಿಯನ್ನು ರಾಜನ ಬಳಿಗೆ ಕರತಂದನು. ರಾಜನು ಪದ್ಮರುಚಿಗೆ--ನೀವು ಆ ಚಿತ್ರಗಳನ್ನು ನೋಡಿ, ಆಶ್ಚರ್ಯಪಟ್ಟ ಕಾರಣವೇನೆಂದು ಕೇಳಿದನು. ಆಗ ಪದ್ಮರುಚಿಯು-ನಾನು ಹಿಂದಕ್ಕೊಮ್ಮೆ ಇದೇ ಪ್ರಕಾರ ಬಿದ್ದುಕೊಂಡ ಎತ್ತಿನ ಕಿವಿಯಲ್ಲಿ ಣಮೋಕಾರಮಂತ್ರವನ್ನು ನುಡಿದಿದ್ದೆನು. ಆ ಚಿತ್ರಗಳನ್ನು ನೋಡಿ ನನಗೆ ಹಿಂದಿನ ಸಂಗತಿಯು ಸ್ಮರಣವಾದ್ದರಿಂದ ನಾನು ಆಶ್ಚರ್ಯಗೊಂಡೆನು.

ಈ ಸಂಗತಿಯನ್ನು ಕೇಳಿ, ರಾಜನು ಪದ್ಮರುಚಿಗೆ ತನ್ನ ಪರಿಚಯವನ್ನು ಮಾಡಿಕೊಟ್ಟನು ಮತ್ತು ಆ ಎತ್ತಿನ ಜೀವವು ತಾನೇ ಎಂದು ಹೇಳಿದನು. ಬಳಿಕ ಪದ್ಮರುಚಿಯನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿದನು.

ಮುಂದೆ ಈ ವೃಷಭಧ್ವಜರಾಜನೇ ದೇವಗತಿಯೊಳಗಿನ ಮತ್ತು ಮನುಷ್ಯಜಾತಿಯೊಳಗಿನ ಸುಖಗಳನ್ನು ಅನುಭವಿಸಿ, ಸುಗ್ರೀವರಾಜನಾಗಿ ಹುಟ್ಟಿದನು.

ಣಮೋಕಾರಮಂತ್ರದ ಪ್ರಭಾವದಿಂದ ಒಂದು ಪಶುವು ಉಚ್ಚ ಪದವಿಯನ್ನು ಹೊಂದಿತು. ಅಂದಮೇಲೆ ನಾವು ಯಾಕೆ ಮುಕ್ತರಾಗಲಿಕ್ಕಿಲ್ಲ?





## ೪ನೆಯ ಪಾಠ.

## ದೇವದರ್ಶನ.

ಬಾಲಕರೇ, ದಿನಾಲು ಮಂದಿರಕ್ಕೆ ಹೋಗಿ ಜಿನೇಶ್ವರನ ಪ್ರತಿಮೆಯ ದರ್ಶನವನ್ನು ತಕ್ಕೊಳ್ಳಬೇಕು. ಮೊಟ್ಟಮೊದಲು ಗುಡಿಯೊಳಗೆ ಹೊಕ್ಕ ಕೂಡಲೇ ಜಿನೇಶ್ವರನ ಮಂಡಪದ ಸುತ್ತಲು

ಪ್ರದಕ್ಷಿಣೆಗಳನ್ನು ಹಾಕುವ ದಾರಿ ಇರುತ್ತದೆ. ಅದರಗುಂಟ ಪ್ರತಿಮೆಯ ಬಲಭಾಗದಿಂದ ಅಂದರೆ, ತನ್ನ ಎಡಗೈಯ ನಿಟ್ಟಿನ ಹಾದಿಯಿಂದ ಹೋಗಿ ಮೂರು ಪ್ರದಕ್ಷಿಣೆಗಳನ್ನು ಹಾಕಬೇಕು. ಬಳಿಕ ಜಿನೇಶ್ವರನಿಗೆ ನಮಸ್ಕಾರ ಮಾಡಬೇಕು. ಎರಡೂ ಮೊಣಕಾಲುಗಳನ್ನು ನೆಲಕ್ಕೂರಿ, ಎರಡೂ ಕೈಗಳನ್ನು ತಲೆಯಮೇಲಿಟ್ಟು, ಹಣೆಯನ್ನು ನೆಲಕ್ಕೆ ಊರಬೇಕು; ಅಂದರೆ ನಮಸ್ಕಾರಮಾಡಿದಂತಾಗುವದು. ಪ್ರದಕ್ಷಿಣೆಯನ್ನು ಹಾಕುವಾಗ, ನಮಸ್ಕಾರವನ್ನು ಮಾಡುವಾಗ ಬಾಯಿಂದ ಜಿನೇಶ್ವರನ ಸ್ತೋತ್ರವನ್ನು ನುಡಿಯಬೇಕು. ಜಿನೇಶ್ವರನ ಗುಣಗಳನ್ನು ವರ್ಣಿಸುವದೇ ಆತನ ಸ್ತುತಿಯು. ಅರಿಹಂತರ ಗುಣಗಳು ತಮ್ಮ ಮೈಯುಣ್ಣಬೇಕೆಂದು ನಾವು ಸ್ತೋತ್ರವನ್ನು ಪಾಡಬೇಕು. ಸ್ತುತಿಯು ಮುಗಿದ ಕೂಡಲೆ ಣಮೋಕಾರ ಮಂತ್ರವನ್ನು ನುಡಿಯಬೇಕು. ಣಮೋಕಾರಮಂತ್ರವನ್ನಾಗಲೀ ಸ್ತುತಿಯನ್ನಾಗಲೀ ನುಡಿಯುವಾಗ ಅರಿಹಂತರ ಶಾಂತ ಮೂರ್ತಿಯ ಕಡೆಗೆ ನೋಡುತ್ತ ಆ ಬಗೆಯ ಶಾಂತತೆಯು ತನ್ನಲ್ಲಿ ಬರುವಂತೆ ಯತ್ನಿಸಬೇಕು. ಸ್ತುತಿಯ ಕವಿತೆಗಳನ್ನು ಬಾಯಿಪಾಠ ಮಾಡಿದರೆ, ಅನ್ನಲಿಕ್ಕೆ ಹಗುರಾಗುತ್ತದೆ. ಸ್ತುತಿಯ ಸಾರಾಂಶವು ಸಾಧಾರಣವಾಗಿ ಕೆಳಗೆ ಬರೆದಂತೆ ಇರುತ್ತದೆ.

‘ ಎಲೈ ಪರಮೇಶ್ವರನೇ ನಿನಗೆ ಜಯಜಯಕಾರವಿರಲಿ! ನಿನ್ನಲ್ಲಿ ಯಾವ ದೋಷಗಳೂ ಇಲ್ಲದ್ದರಿಂದ ನೀನು ವೀತರಾಗನಿರುವಿ. ನೀನು ಜಗತ್ತಿನೊಳಗಿನ ಎಲ್ಲ ಒಡವೆಗಳನ್ನು ನೋಡುವದರಿಂದಲೂ,

ತಿಳಿಯುವದರಿಂದಲೂ ಸರ್ವಜ್ಞನಾಗಿರುವಿ. ನೀನು ಜಗತ್ತಿನೊಳಗಿನ ಎಲ್ಲ ಜೀವಿಗಳಿಗೆ ಧರ್ಮೋಪದೇಶವನ್ನು ಮಾಡುವಿ. ನಿನ್ನ ಧರ್ಮವನ್ನು ಕೇಳಿ ಹಲವು ಜೀವಾತ್ಮರು ನಿನ್ನಂತೆ ಆಗಿರುವರು.'

'ಎಲೈ ಪರಮೇಶ್ವರನೇ! ನಿನ್ನಲ್ಲಿ ಅನಂತ ಶಕ್ತಿಯು ಇದೆ. ನಿನ್ನ ಜ್ಞಾನವು ಅನಂತವಾಗಿದೆ. ನಿನ್ನ ವೀತರಾಗ ಶಾಂತವಾದ ಮುಖಮುದ್ರೆಯನ್ನು ನೋಡಿ, ನಿನ್ನ ಭಕ್ತರ ಮನಸ್ಸಿನೊಳಗಿನ ಸಿಟ್ಟು, ಮತ್ಸರ, ಮೋಹ, ಕ್ರೋಧ, ಲೋಭ, ಸೊಕ್ಕು ಮತ್ತು ಮೋಸ ಈಎಲ್ಲ ವಿಕಾರಗಳು ಇಲ್ಲದಂತಾಗುತ್ತವೆ. ನಿನ್ನ ಅನಂತ ಜ್ಞಾನವನ್ನು ನೋಡಿ, ಅಲ್ಪಜ್ಞರಾದ ನಾವೂ ನಿನ್ನಂತೆ ಜ್ಞಾನಿಗಳಾಗಬೇಕು. ಹೀಗೆ ಆಗುವದು ಸ್ವಾಭಾವಿಕವು. ನೀನು ವೀತರಾಗ ಸರ್ವಜ್ಞನಾಗಿ ಜಗತ್ತಿಗೆ ನಿಜವಾದ ಮಾರ್ಗವನ್ನು ತೋರಿಸಿರುವಿ. ನಿನ್ನ ಗುಣಗಳು ನಮ್ಮಲ್ಲಿ ಬರಬೇಕು, ಹೀಗೆ ನಮ್ಮೆಲ್ಲರ ಆಶೆಯದೆ. ನೀನು ಸ್ವತಃ ಮುಕ್ತನಾಗಿ ಅನ್ಯರನ್ನು ಕಾಯುವದರಿಂದ ನೀನು ಧನ್ಯನಾಗಿರುವಿ. ನಿನ್ನನ್ನು ನಾನು ಪುನಃ ಪುನಃ ನಮಸ್ಕರಿಸುತ್ತೇನೆ.



## ೫ನೆಯ ಪಾಠ.

## ಕಪ್ಪೆಯ ಕಥೆ.



ರಾಜಗೃಹ ಪಟ್ಟಣದಲ್ಲಿ ಶ್ರೇಣಿಕರಾಜನು ರಾಜ್ಯವಾಳುತ್ತಿದ್ದನು. ವಿಪುಲಾಚಲ ಪರ್ವತದ ಮೇಲೆ ಮಹಾವೀರ ಸ್ವಾಮಿಗಳ ಸಮವಸರಣವು ಬಂದಿತ್ತು. ಶ್ರೇಣಿಕರಾಜನು ತನ್ನ ಪರಿವಾರದೊಂದಿಗೆ ಸ್ವಾಮಿಗಳ ದರ್ಶನಕ್ಕಾಗಿ ಅಲ್ಲಿಗೆ ಹೋದನು. ದರ್ಶನ-ಪೂಜಾ ವಿಧಿಗಳು ಮುಗಿದನಂತರ ಒತ್ತಟ್ಟಿಗೆ ಹೋಗಿ, ಕುಳಿತುಕೊಂಡನು. ಅಷ್ಟರಲ್ಲಿ ಒಬ್ಬ ದೇವನು ಅಲ್ಲಿಗೆ ಬಂದನು. ಅವನಲ್ಲಿ ಐಶ್ವರ್ಯವು ಬಹಳವಾಗಿದ್ದು, ಅವನ ಮುಕುಟದಮೇಲೂ, ನಿಶಾನಿಯಮೇಲೂ

ಕಪ್ಪೆಯ ಚಿಹ್ನವಿತ್ತು. ಅದನ್ನು ನೋಡಿ, ಶ್ರೇಣಿಕನು ಸೋಜಿಗೆ ಗೊಂಡನು. ಹಾಗೂ ಗಣಧರರಿಗೆ ಈಗ ಬಂದಂಥ ದೇವನು ಯಾವ ಪುಣ್ಯಕರ್ಮದಿಂದ ದೇವನಾಗಿರುವನು ? ಎಂದು ಕೇಳಿದನು. ಅದಕ್ಕೆ ಗಣಧರರು- ಈ ರಾಜಗೃಹ ಪಟ್ಟಣದಲ್ಲಿ ನಾಗದತ್ತ ಶ್ರೇಷ್ಠಿಯೂ ಆತನ ಹೆಂಡತಿಯಾದ ಭವದತ್ತೆಯೂ ಇರುತ್ತಿದ್ದರು. ನಾಗದತ್ತನು ಮರಣಹೊಂದಿದ ಮೇಲೆ ಕಪ್ಪೆಯಾಗಿ ಹುಟ್ಟಿ ತನ್ನ ಮನೆಯ ಹಿತ್ತಲೊಳಗಿನ ಬಾವಿಯಲ್ಲಿ ಇರುತ್ತಿದ್ದನು. ಒಂದು ದಿವಸ ತನ್ನ ಪೂರ್ವ ಜನ್ಮದ ಹೆಂಡತಿಯನ್ನು ನೋಡಿ, ಆ ಕಪ್ಪೆಗೆ ಜಾತಿಯ ಸ್ಮರಣ ವಾಯಿತು. ಆಗ ಆ ಕಪ್ಪೆಯು ಭವದತ್ತೆಯ ಹತ್ತರ ಹೋಗುವ ಯತ್ನವನ್ನು ಮಾಡಹತ್ತಿತು. ಭವದತ್ತೆಯು ಕಪ್ಪೆಗೆ ಬಹಳೀ ಅಂಜುತ್ತಿರುವದರಿಂದ ಕಪ್ಪೆಯನ್ನು ಕಂಡಕೂಡಲೇ ಓಡಿಹೋಗುತ್ತಿದ್ದಳು.

ಒಂದು ದಿವಸ ಸುವ್ರತ ಎಂಬ ಹೆಸರಿನ ಅವಧಿಜ್ಞಾನಿಮುನಿಗಳು ಭವದತ್ತೆಯ ಮನೆಗೆ ಬಂದರು. ಆಗ ಭವದತ್ತೆಯು ಮುನಿಗಳನ್ನು ಕುರಿತು, ಮಹಾರಾಜ! ಈ ಕಪ್ಪೆಯ ಜನ್ಮಾಂತರದ ಕಥೆಯು ಏನೆಂದು ಕೇಳಿದಳು. ಅದಕ್ಕೆ ಮುನಿಗಳು-ಇದು ನಿನ್ನ ಪತಿಯಾದ ನಾಗದತ್ತನ ಜೀವವಾಗಿರುವದು, ಎಂದು ಹೇಳಿದರು. ಕೂಡಲೇ ಭವದತ್ತೆಯು ಆ ಕಪ್ಪೆಯನ್ನು ಹಿಡತರಿಸಿ ಚನ್ನಾಗಿ ಉಪಚರಿಸಹತ್ತಿದಳು. ಬಳಿಕ ಒಂದಾನೊಂದು ದಿವಸ ಮಹಾವೀರ ಸ್ವಾಮಿಗಳ ಸಮವಸರಣವು ಮತ್ತೊಮ್ಮೆ ಬಂತು. ಆಗ ಎಲ್ಲರೂ

ಆವರ ದರ್ಶನಕ್ಕೆ ಹೋಗಬೇಕೆಂದು ರಾಜನು ಡಂಗುರವನ್ನು ಹೊಯ್ಸಿದನು. ಆ ಸಪ್ಪಳವು ಕಪ್ಪೆಯ ಕಿವಿಗೆ ಬಿತ್ತು. ಆಗ ಅದು ಹಲ್ಲಲ್ಲಿ ಒಂದು ಕಮಲದ ಪಕ್ಕಳಿಯನ್ನು ಹಿಡಕೊಂಡು ಮಹಾವೀರಸ್ವಾಮಿಗಳ ಪೂಜೆಗಾಗಿ ಹೋಗಹತ್ತಿತು. ಆಗ ನಿಮ್ಮ ಆನೆಯ ಕಾಲ ಬುಡಕ್ಕೆ ಸಿಕ್ಕು ಅದು ಜಿಜ್ಜಿಯಾಗಿ ಸತ್ತು ಈ ದೇವನಾಗಿ ಬಂದಿರುವದು ಎಂದು ಹೇಳಿದರು. ಆಗ ಶ್ರೇಣಿಕರಾಜನಿಗೆ ಸೋಜಿಗವಾಯಿತು. ಕಪ್ಪೆಯು ಪೂಜೆಯ ಇಚ್ಛೆಯನ್ನು ಪ್ರಕಟಮಾಡಿದ್ದರಿಂದ ದೇವರಾಯಿತು ಅಂದಮೇಲೆ ಮನುಷ್ಯರಾದ ನಾವು ದೇವರಾಗಲಿಕ್ಕಿಲ್ಲವೇ ?



## ೬ನೆಯ ಪಾಠ.

# ಜಾಣ ಹುಡುಗ.

ಬೆಳಗಾವಿಯಲ್ಲಿ ಜಿನದಾಸ ಎಂಬ ಹೆಸರಿನ ಒಬ್ಬ ಬಡಹುಡುಗನಿದ್ದನು. ಅವನ ತಾಯಿಯು ಬಟ್ಟೆ ಹೊಲಿಯುವ ಹೋರೆಯನ್ನು ಮಾಡಿ, ತನ್ನ ಉಪಜೀವಿಕೆಯನ್ನು ಸಾಗಿಸುತ್ತಿದ್ದಳು. ಅವಳು ಚಿಕ್ಕಂದಿನಿಂದಲೇ ಜಿನದಾಸನ ಶಿಕ್ಷಣದ ಕಡೆಗೆ ಮನಸ್ಸಿಟ್ಟಿದ್ದಳು. ಅವಳು ಧಾರ್ಮಿಕಳಿದ್ದು ದಿನಾಲು ಧರ್ಮಗ್ರಂಥಗಳನ್ನು ನಿಯಮದಿಂದ ಓದುತ್ತಿದ್ದಳು. ಅವಳು ಬೆಳಿಗ್ಗೆ ಬೇಗನೆ ಏಳುತ್ತಿದ್ದಳು. ಅವಳೊಡನೆ ಜಿನದಾಸನೂ ಏಳುತ್ತಿದ್ದನು. ಇಬ್ಬರೂ ದೇವರ ದರ್ಶನ

ವನ್ನು ತೆಗೆದುಕೊಳ್ಳುತ್ತಿದ್ದರು. ಜಿನದಾಸನಿಗೆ ಅವನ ತಾಯಿಯು ಚಿಕ್ಕಂದಿನಲ್ಲಿಯೇ ಜಿನಸ್ತುತಿಯನ್ನು ಅನ್ನಲಿಕ್ಕೆ ಕಲಿಸಿದ್ದಳು. ಅವನು ದಿನಾಲು ಸಾಲೆಗೆ ಹೋತ್ತಿದ್ದನು. ಈಗ ಕನ್ನಡ ಐದನೇ ಇಯತ್ತೆಯು ಮುಗಿದದ್ದರಿಂದ ಅವನು ದೊಡ್ಡ ಸಾಲೆಗೆ ಹೋಗುತ್ತಿದ್ದನು. ಬಡತನವಿದ್ದದರಿಂದ ಅವನಿಗೆ ಸಾಲೆಯ ಫೀ ಕೊಡುವದು ಬಿಗಿಯಾಗಿತ್ತು. ಅಂತೇ ಅವನು ತನ್ನ ಹೆಸರನ್ನು ಮಾಫೀ ವಿದ್ಯಾರ್ಥಿಯಂತೆ ಹಚ್ಚಿಕೊಳ್ಳಬೇಕೆಂದು ತನ್ನ ಗುರುಗಳಿಗೆ ಬೇಡಿಕೊಂಡನು. ಅದರಂತೆ ಗುರುಗಳು ಆತನನ್ನು ಮಾಫೀ ಸದರಿನಲ್ಲಿ ಸೇರಿಸಿದರು.

ಜಿನದಾಸನು ಯಾವಾಗಲೂ ಗುರುಗಳ ಆಜ್ಞೆಯಂತೆ ನಡೆಯುತ್ತಿದ್ದನು. ಅದರಿಂದ ಗುರುಗಳ ಪ್ರೇಮವು ಆತನ ಮೇಲೆ ವಿಶೇಷವಾಗಿತ್ತು. ಜಿನದಾಸನು ತಾಯಿಯ ಆಜ್ಞೆಯನ್ನು ಮೀರಿ ಎಂದೂ ನಡೆಯಲಿಲ್ಲ. ಅವನು ತನ್ನ ತಾಯಿಗೆ ಕೆಲಸಬೊಗಸೆಗಳಲ್ಲಿ ಹಗಲೆಲ್ಲ ನೆರವಾಗುತ್ತಿದ್ದನು. ಅವನಿಗೆ ಬಿಡಿ ಸೇದುವದೂ, ಹೆಡ್ಡಾ ಆಡುವದೂ ಇವೇ ಮೊದಲಾದ ಕಾಡು ಚಟಗಳೇನೂ ಇದ್ದಿಲ್ಲ. ಅವನು ಯಾವಾಗಲೂ ಸತ್ಯವನ್ನೇ ಆಡುತ್ತಿದ್ದನು.

ಜಿನದಾಸನ ಶಿಕ್ಷಣವು ಮುಗಿದ ಕೂಡಲೇ ಒಬ್ಬ ವ್ಯಾಪಾರಸ್ಥನ ಅಂಗಡಿಯಲ್ಲಿ ಆತನಿಗೆ ನೌಕರಿಯು ದೊರೆಯಿತು. ಅವನು ತೀವ್ರವೇ ಒಡೆಯನ ವಿಶ್ವಾಸಕ್ಕೆ ಪಾತ್ರನಾದನು. ಅದರಿಂದ ಆ ಅಂಗಡಿಯ ಒಡೆಯನು ತನ್ನ ಅಂಗಡಿಯಲ್ಲಿ ಅವನನ್ನು ಪಾಲುಗಾರನನ್ನಾಗಿ ಮಾಡಿಕೊಂಡನು. ಅದರಿಂದ ಜಿನದಾಸನು ತೀವ್ರವೇ ಸಿರಿ

ವಂತನಾದನು. ಮುಂದೆ ಅವನು ಬಡ ವಿದ್ಯಾರ್ಥಿಗಳಿಗೆ ಬಹಳೇ ದ್ರವ್ಯಸಹಾಯವನ್ನು ಮಾಡಿದನು. ಅದರಿಂದ ಅವನು ಸಮಾಜದಲ್ಲಿ ಹೆಸರಿಗೆ ಬಂದನು.



## ೭ನೆಯ ಪಾಠ.

# ಣಮೋಕಾರಮಂತ್ರದ ಮಹಿಮೆ.

ಕಾಶೀಪಟ್ಟಣದಲ್ಲಿ ಅಕಂಪನ ಎಂಬ ಹೆಸರಿನ ಒಬ್ಬ ರಾಜ ನಿದ್ದನು. ಆತನ ರಾಣಿಯ ಹೆಸರು ಸುಪ್ರಭೆ. ಅವಳ ಹೊಟ್ಟೆಯಲ್ಲಿ ಸುಲೋಚನೆಯಂಬ ಹೆಸರಿನ ಒಬ್ಬ ಹುಡುಗಿಯು ಹುಟ್ಟಿದಳು. ಅವಳು ಧರ್ಮಿಷ್ಠಳೂ ಎಲ್ಲ ಕಲೆಗಳನ್ನು ಬಲ್ಲವಳೂ ಆಗಿದ್ದಳು. ಅವಳು ಹಗಲೆಲ್ಲ ವಿದ್ಯಾಭ್ಯಾಸವನ್ನು ಸ್ವತಃ ಮಾಡುತ್ತಿದ್ದು, ಎರಡನೆಯ ಸ್ತ್ರೀಯರಿಗೂ ಕಲಿಸುತ್ತಿದ್ದಳು. ವಿಂಧ್ಯಪುರದ ಅರಸನಾದ ವಿಂಧ್ಯಕೀರ್ತಿಯು ಅಕಂಪನರಾಜನ ಗೆಳೆಯನು. ಅವನ ಅರಸಿಯ ಹೆಸರು ಪ್ರಿಯಂಗುಶ್ರೀ ಎಂಬದಾಗಿತ್ತು. ಅವಳ ಮಗಳ ಹೆಸರು ವಿಂಧ್ಯಶ್ರೀಯು. ವಿಂಧ್ಯಕೀರ್ತಿರಾಜನು ತನ್ನ ಮಗಳನ್ನು ಸುಲೋಚನೆಯ ವಶದಲ್ಲಿ ಕೊಟ್ಟು, ಇವಳಿಗೆ ಎಲ್ಲ ವಿದ್ಯೆಗಳನ್ನು ಕಲಿಸು ಎಂದು ಹೇಳಿ, ತನ್ನ ರಾಜಧಾನಿಗೆ ಹೊರಟುಹೋದನು. ವಿಂಧ್ಯಶ್ರೀಯು ಸುಲೋಚನೆಯ ಬಳಿಯಲ್ಲಿ ವಿದ್ಯೆಯನ್ನು ಕಲಿಯುತ್ತ ಸುಖದಿಂದ ಇರಹತ್ತಿದಳು.

ಒಂದು ದಿನ ಸುಲೋಚನೆಯು ತನ್ನ ಹೂದೋಟದೊಳಗಿಂದ ಹೂಗಳನ್ನು ತರಲು ವಿಂಧ್ಯಶ್ರೀಗೆ ಹೇಳಿದಳು. ಆಗ ವಿಂಧ್ಯಶ್ರೀಯು ಹೂದೋಟಕ್ಕೆ ಹೋಗಿ, ಹೂಗಳನ್ನು ಹರಿಯಹತ್ತಿದಳು. ಆಗ ಅವಳಿಗೆ ಒಂದು ಹಾವು ಕಚ್ಚಿತು. ಈ ಸುದ್ದಿಯು ಸುಲೋಚನೆಗೆ ತಿಳಿಯಲು, ಅವಳು ಅಲ್ಲಿಗೆ ಓಡುತ್ತ ಬಂದು, ವಿಂಧ್ಯಶ್ರೀಯ ಕಿವಿಯಲ್ಲಿ ಣಮೋಕಾರಮಂತ್ರವನ್ನು ನುಡಿದಳು. ಆ ಮಂತ್ರಪ್ರಭಾವದಿಂದ ವಿಂಧ್ಯಶ್ರೀಯು ಮುಂದಣ ಜನ್ಮದಲ್ಲಿ ಗಂಗಾಕೂಟ ವನದೊಳಗೆ ಗಂಗಾದೇವಿ ಎಂಬ ಹೆಸರಿನ ದೇವತೆಯಾದಳು. ಆಗ ಅವಳಿಗೆ ತನ್ನ ಮೇಲೆ ಉಪಕಾರ ಮಾಡಿದ ಸ್ತ್ರೀಯ ನೆನಪಾಯಿತು. ಕೂಡಲೇ ಅವಳು ಸುಲೋಚನೆಯು ಇದ್ದಲ್ಲಿಗೆ ಬಂದಳು. ಹಾಗೂ ಅವಳನ್ನು ಪೂಜಿಸಿ, ತಿರುಗಿ ತನ್ನ ಸ್ಥಳಕ್ಕೆ ಹೋಗಿ ಸುಖದಿಂದ ಇರಹತ್ತಿದಳು.



## ೮ನೆಯ ಪಾಠ.

## ದೇವರ ಪೂಜೆ.

ವಿನಯಕುಮಾರ-ಅಪ್ಪಾ ಈ ಗುಡಿಯು ಯಾವ ದೇವರದು?

ಜಿನದಾಸ—ಮಗುವೇ, ಇದು ಜಿನೇಂದ್ರನ ಗುಡಿಯದೆ. ಇದರೊಳಗಿನ ಪ್ರತಿಮೆಯು ಪಾರ್ಶ್ವನಾಥ ತೀರ್ಥಂಕರರದು ಇರುತ್ತದೆ. ಪಾರ್ಶ್ವನಾಥರು ೨೩ನೇ ತೀರ್ಥಂಕರರು.

ವಿನ.:-ಇಲ್ಲಿ ಈ ಜನರು ನೆರೆದು ಏನು ಮಾಡುತ್ತಿರುವರು?

ಜಿ.:-ಈ ಜನಗಳ ಮಧ್ಯದಲ್ಲಿ ಕುಳಿತವರು ನಮ್ಮ ಊರ ರಾಮುಭಾವು ಶೇಠರು. ಅವರು ಪೂಜೆಯನ್ನು ಮಾಡುತ್ತಿರುವರು.

ವಿನ.—ಅಪ್ಪಾ ಪೂಜೆಯುಂದರೇನು? ಮತ್ತು ಅದನ್ನು ಯಾಕೆ ಮಾಡಬೇಕು?

ಜಿನ.:— ಯಾವನೊಬ್ಬನ ಗುಣಗಳನ್ನು ವರ್ಣಿಸಿ, ಅವನನ್ನು ಸತ್ಕರಿಸುವದು ಪೂಜೆಯನಿಸುತ್ತದೆ. ಇಲ್ಲಿ ಶ್ರೀ ಅರಹಂತ ದೇವರು, ನಿರ್ಗ್ರಂಥ ಗುರು ಮತ್ತು ಜೈನಶಾಸ್ತ್ರ ಇವುಗಳ ಗುಣಗಳನ್ನು ವರ್ಣಿಸಿ, ಅವರಿಗೆ ಎಂಟು ಪ್ರಕಾರದ ದ್ರವ್ಯಗಳನ್ನು ಅರ್ಪಿಸುತ್ತಾರೆ. ಈ ಕೃತ್ಯಕ್ಕೆ ಜಿನಪೂಜೆ ಅನ್ನುವರು.

ವಿನ.—ಆ ದ್ರವ್ಯಗಳು ಯಾವವು?

ಜಿನ.—ಜಲ ಅಂದರೆ ನೀರು. ಗಂಧ ಅಂದರೆ ಕೇಶರ ಮತ್ತು ಶ್ರೀಗಂಧಗಳನ್ನು ತೆಯ್ದು ತೆಗೆದ ಪದಾರ್ಥವು. ಅಕ್ಷತೆ ಅಂದರೆ ಅಕ್ಕೀಕಾಳು. ಪುಷ್ಪ ಅಂದರೆ ಹೂವು. ನೈವೇದ್ಯ ಅಂದರೆ ತಿನ್ನುವದಕ್ಕಾಗಿ ಮಾಡಿದ ಪದಾರ್ಥಗಳು. ದೀಪ ಅಂದರೆ ದೀವಿಗೆಯು. ಧೂಪವೆಂದರೆ ಸುಗಂಧವುಳ್ಳ ಪದಾರ್ಥದ ಹೊಗೆಯು. ಫಲ ಅಂದರೆ ಟೆಂಗಿನಕಾಯಿ, ಬದಾಮು ಮೊದಲಾದವುಗಳು.

ವಿನ.——ಈ ದ್ರವ್ಯಗಳನ್ನು ಅರ್ಪಿಸುವಾಗ ಪೂಜೆಯನ್ನು ಮಾಡುವವನು ಬಾಯಿಂದ ಏನು ನುಡಿಯಬೇಕು? ಮತ್ತು ಅದರ ಗುಟ್ಟುಗುರಿಗಳು ಏನು?

ಜಿನ.——ನಾವು ಯಾರನ್ನು ಪೂಜಿಸುತ್ತೇವೋ ಅವರಲ್ಲಿಯ ಗುಣಗಳು ನಮ್ಮಲ್ಲಿ ಬರಬೇಕು, ಹೀಗೆ ಭಾವಿಸಿಕೊಂಡು ಮೇಲೆ ಹೇಳಿದ ದ್ರವ್ಯಗಳಲ್ಲಿ ಒಂದೊಂದನ್ನು ಮಂತ್ರಗಳನ್ನು ನುಡಿದು

ಅರ್ಪಿಸಬೇಕು. ಎಂಟು ದ್ರವ್ಯಗಳ ಗುಂಪಿಗೆ ಅಷ್ಟದ್ರವ್ಯವೆನ್ನುವರು. ತಮ್ಮ ಹತ್ತಿರಿರುವ ಕರ್ಮಗಳು ಇಲ್ಲದಂತಾಗಿ ತಮ್ಮ ಆತ್ಮವು ವಿಕಾರರಹಿತವಾದದ್ದು ಅಂದರೆ ಶುದ್ಧವಾದದ್ದು ಈ ತರದ ಭಾವನೆಯನ್ನು ಮಂತ್ರಗಳಲ್ಲಿ ಯೋಚಿಸಬೇಕು.

ವಿನ.--ಹಾಗಾದರೆ, ಅಪ್ಪಾ ನನಗೂ ಪೂಜೆಯನ್ನು ಹೇಗೆ ಮಾಡಬೇಕು ಮತ್ತು ಮಂತ್ರಗಳನ್ನು ಹೇಗೆ ನುಡಿಯಬೇಕೆಂಬದನ್ನು ಕಲಿಸಿರಿ. ಅಂದರೆ ನಾನೂ ದಿನಾಲು ಪೂಜೆಯನ್ನು ಮಾಡುವೆನು.



## ೯ನೆಯ ಪಾಠ.

# ಜಳಕ ಮಾಡುವದೂ ಮತ್ತು ಗಂಧ ಹಚ್ಚಿಕೊಳ್ಳುವದು.

ಜಳಕ ಮಾಡುವದು ಶ್ರಾವಕನ ನಿತ್ಯಕರ್ತವ್ಯಗಳಲ್ಲಿ ಒಂದಾಗಿದೆ. ನಿತ್ಯಪೂಜೆಯು ಸಲುವಾಗಿಯೂ ಆಹಾರವನ್ನು ಶುದ್ಧಮಾಡುವದಕ್ಕಾಗಿಯೂ ಶ್ರಾವಕನು ದಿನಾಲು ಮುಂಜಾವಿನಲ್ಲಿ ಜಳಕವನ್ನು ಮಾಡಲೇಬೇಕು. ಸಂಸಾರದಲ್ಲಿ ಎಷ್ಟೋ ಕೆಲಸಗಳನ್ನು ಮಾಡುವದರಿಂದ ಶರೀರವೂ ಮನಸ್ಸೂ ಹೊಲಸಾಗಿರುತ್ತವೆ. ಅವುಗಳನ್ನು ಶುದ್ಧಮಾಡುವದಕ್ಕಾಗಿ ಜಳಕವನ್ನು ಮಾಡಬೇಕಾಗುತ್ತದೆ. ಜಳಕ ಮಾಡುವದರಿಂದ ಮೈಯು ನಿರ್ಮಲವಾಗುತ್ತದೆ. ಬೇನೆಗಳು ಬರುವದು ಕಡಿಮೆ. ಸ್ನಾನಮಾಡುವದು ಶ್ರಾವಕನ ಸದಾಚಾರವನ್ನು ಸೂಚಿಸುತ್ತದೆ. ಜಳಕವನ್ನು ತಣ್ಣೀರಿನಿಂದ ಮಾಡುವದು ಹಿತಕರವು.

ತಣ್ಣೀರು ತಡೆಯದವರು ಬಿಸಿನೀರಿನಿಂದಾದರೂ ಜಳಕವನ್ನು ಮಾಡ ಬೇಕು. ಜಳಕಕ್ಕೆ ಸೋಸಿದ ನೀರನ್ನು ಉಪಯೋಗಿಸಬೇಕು. ಸ್ನಾನದ ಕಾಲಕ್ಕೆ ಶರೀರದ ಸಂದಿಗೊಂದಿಗಳನ್ನು ಚನ್ನಾಗಿ ತಿಕ್ಕಿಕೊಳ್ಳಬೇಕು.

ಗಂಧವನ್ನು ಹಚ್ಚಿಕೊಳ್ಳುವದೂ ಜೈನರ ಸದಾಚರಣೆಯಾಗಿದೆ. ಜೈನರು ಕೇಶರದ ಗಂಧವನ್ನಾಗಲೀ ಶ್ರೀಗಂಧದ ಗಂಧವನ್ನಾಗಲೀ ಹಚ್ಚಿಕೊಳ್ಳಬೇಕು. ಶಾಸ್ತ್ರದಲ್ಲಿ ಗಂಧವನ್ನು ಹಚ್ಚಿಕೊಳ್ಳಬೇಕೆಂದು ಹೇಳಿದೆ. ಗಂಧವನ್ನು ಹಚ್ಚಿಕೊಳ್ಳುವಾಗ ಮಂತ್ರವನ್ನು ನುಡಿಯ ಬೇಕು. ಕೇಶರದ ಗಂಧವನ್ನು ಹಚ್ಚಿಕೊಳ್ಳುವದು ಜೈನಧರ್ಮದ ಹೆಗ್ಗುರುತು. ದಿನಾಲು ಬೆಳಿಗ್ಗೆ ಜಳಕವನ್ನು ಮಾಡಿ ಗಂಧವನ್ನು ಹಚ್ಚಿಕೊಂಡು, ದೇವರ ದರ್ಶನವನ್ನು ತೆಗೆದುಕೊಂಡು ಬರುವ ರೂಢಿ ಯನ್ನಿಡಬೇಕು. ಆ ಮೇಲೆ ಉಣ್ಣಬೇಕು.



## ೧೦ನೆಯ ಪಾಠ.

# ಉಪದೇಶ.

ಯಾರು ಭಕ್ತಿಯಿಂದ ಜಿನೇಶ್ವರನ ಭಜಿಪರು ।
ಪರಮಪ್ರೇಮದಿಂದ ಪೂಜೆಮಾಡಯೋಗ್ಯರು ॥ ೧ ॥
ಯಾರು ಜಿನೇಶ್ವರನ ಪೂಜೆಯನ್ನು ಮಾಡರು ।
ದುರಿತ ಮನುಜರವರ ಕಾಣೋ ಜನ್ಮ ವ್ಯರ್ಥವು ॥ ೨ ॥
ಬೇಗನೆದ್ದು ಅರ್ಹಗುರುಶಾಸ್ತ್ರದರ್ಶನಾ ।
ಬಾಗಿ ಭಕ್ತಿಯಿಂದ ಕೇಳು ಧರ್ಮಶಾಸ್ತ್ರನಾ ॥ ೩ ॥

ಬಳಿಕ ಉಳಿದ ಕೆಲಸಗಳನು ನೀವು ಮಾಡಿರಿ।
ತಿಳಿದು ಧರ್ಮಕಾಮಮೋಕ್ಷವನ್ನು ಪಡೆಯಿರಿ ॥ ೪ ॥
ಜ್ಞಾನಚಕ್ಷು ಗುರುಗಳಿಂದೆ ನಮಗೆ ದೊರೆವವು।
ಜ್ಞಾನಮಾರ್ಗ ಕರದ ರೇಖೆಯಂತೆ ತಿಳಿವುದು ॥ ೫ ॥
ಗುರುಗಳನ್ನು ಹಳಿದು ಯಾರು ಸೇವೆ ಮಾಡರು।
ಇರುಳಿನಂತೆ ಕಾಣುತಿಹುದು ರವಿಯು ಇದ್ದರು ॥ ೬ ॥
ಕಣ್ಣುಮರೆಯಾದ ಗ್ರಂಥ ಯಾರು ಪಠಿಪರು।
ಕಣ್ಣು ಕಾಣದಂಥ ಕುರುಡರೆಂದು ಕರೆವರು ॥ ೭ ॥
ಗುರುಗಳಿಂದ ಶಾಸ್ತ್ರಶ್ರವಣ ಮಾಡಲರಿಯರು।
ಪಿರಿದು ಕಿವಿಗಳಿದ್ದು ಅವರು ಅಚ್ಚ ಕುರುಡರು ॥ ೮ ॥

## ೧೧ನೆಯ ಪಾಠ.

## ಅಹಿಂಸಾಧರ್ಮ.

ಅಹಿಂಸಾಧರ್ಮವು ಜೈನರ ಮುಖ್ಯ ಧರ್ಮವಾಗಿದೆ. ಪ್ರಾಣಿಗಳ ಮೇಲೆ ದಯೆ ಮಾಡಬೇಕು. ಯಾರ ಸಂಗಡಲೂ ಹಗೆತನ ಮಾಡಬಾರದು; ಯಾವ ಪ್ರಾಣಿಗಳನ್ನೂ ಮೋಸಗೊಳಿಸಬಾರದು. ಇದಕ್ಕೆ ಅಹಿಂಸಾಧರ್ಮವೆನ್ನುತ್ತಾರೆ. ಹಿಂಸೆ ಮಾಡುವದು ದೊಡ್ಡ ಪಾಪವಾಗಿದೆ. ಹಿಂಸೆ ಅಂದರೆ ಕೊಲ್ಲೋಣ.

ಗೃಹಸ್ಥರು ಅಹಿಂಸಾಧರ್ಮವನ್ನು ಪಾಲಿಸುವದಿದ್ದರೆ, ಧರ್ಮಕ್ಕಾಗಿ, ದೇವರಿಗಾಗಿ, ಊಟಕ್ಕಾಗಿ, ಔಷಧದ ಸಲು

ವಾಗಿ, ಮಂತ್ರತಂತ್ರಗಳ ಸಲುವಾಗಿಯೂ ಕೂಡ ಯಾವದೇ ಪ್ರಾಣಿಯ ಹಿಂಸೆಯನ್ನು ಮಾಡಕೂಡದು. ಧರ್ಮದ ಹೆಸರಿನ ಮೇಲೆ ಹೋತಿನಂಥ ಮೂಕಪ್ರಾಣಿಯನ್ನು ಹೋಮದಲ್ಲಿ ಹಾಕುವದು ಸರಿಯಲ್ಲ. ಹೀಗೆ ಮಾಡುವವರಿಂದ ಪಾಪವು ಮಾತ್ರ ಪಾಲಿಗೆ ಬರುತ್ತದೆ. ಅಹಿಂಸಾಧರ್ಮವನ್ನು ಪಾಲಿಸುವವರು ದುರ್ಗವ್ವ, ದ್ಯಾಮವ್ವ, ಕರೆವ್ವ, ಕಾಟೆವ್ವ, ಭರಮಪ್ಪ ಮುಂತಾದ ದೇವತೆಗಳ ಮುಂದೆ ಯಾವದೇ ಕಾರಣದಿಂದ, ಕೋಳಿ, ಕೋಣ, ಕುರಿ, ಹೋತ ಇವುಗಳನ್ನು ಕೊಲ್ಲಬಾರದು. ಅದರಂತೆ ತಿನ್ನುವದಕ್ಕಾಗಿ, ಔಷಧಕ್ಕಾಗಿ ಯಾವದೇ ಪ್ರಾಣಿಯ ಮಾಂಸ, ನೆಣ, ಮೊಟ್ಟೆ ( ತತ್ತಿ ) ಮುಂತಾದ ಪದಾರ್ಥಗಳನ್ನು ಉಪಯೋಗಿಸಕೂಡದು. ಮನುಷ್ಯರ ಮುಖ್ಯ ತಿಂಡಿಯು ಧಾನ್ಯವಾಗಿದೆ. ಕಾಯಿಪಲ್ಲೆ, ತುಪ್ಪ, ಹಾಲು, ಮೊಸರು, ಮಜ್ಜಿಗೆ ಈ ಪದಾರ್ಥಗಳು ಮನುಷ್ಯರ ಊಟಕ್ಕೆ ಯೋಗ್ಯವಾಗಿವೆ. ಇವುಗಳನ್ನು ತಿನ್ನುವದರಿಂದ ಪ್ರಾಣಿಗಳ ಹಿಂಸೆಯು ಆಗುವದಿಲ್ಲ. ಯಾಕಂದರೆ ಇವು ಪ್ರಾಣಿಗಳ ಅವಯವಗಳಾಗಿಲ್ಲ. ಎಮ್ಮೆ, ಆಕಳು, ಆಡು ಇವುಗಳ ಹಾಲನ್ನು ನಾವು ಯಾವಾಗಲೂ ಉಪಯೋಗಿಸುತ್ತೇವೆ. ಕಾರಣ ಇಂಥ ಉಪಯೋಗವುಳ್ಳ ದನಗಳನ್ನು ಜೋಕೆ ಮಾಡುವದು, ದೇಶಹಿತದ ದೃಷ್ಟಿಯಿಂದ ಹಿತಕರವಾಗಿದೆ.

ತೊಗಲಿನ ಪಾಕೀಟು, ಪೆಟ್ಟಿಗೆ, ಹಾಸಿಗೆಯನ್ನು ಕಟ್ಟುವ ಬಾರು ಮತ್ತು ಕೋಡಿನಿಂದ ಮಾಡಿದ ಹಣಗೆ, ಗುಂಡಿ, ಮುಂತಾದ

ಕೈಯಲ್ಲಿ ಹಿಡಿಯುವ ಒಡವೆಗಳನ್ನು ಬಳಿಸಬಾರದು. ಯಾಕಂದರೆ ಈ ಒಡವೆಗಳನ್ನು ಮಾಡಬೇಕಾದರೆ ಪ್ರಾಣಗಳನ್ನು ಕೊಲ್ಲಬೇಕಾಗುತ್ತದೆ. ಕೈಮಗ್ಗದ ಮೇಲೆ ನೆಯ್ದ ಬಟ್ಟೆಗಳನ್ನೇ ಬಳಿಸಬೇಕು. ಅಂದರೆ ಹಿಂಸೆಯ ಪಾಪವು ಬಾರದೆ ಧರ್ಮರಕ್ಷಣದ ಪುಣ್ಯವು ಖಂಡಿತವಾಗಿ ಬರುವದು.



## ೧೨ನೆಯ ಪಾಠ.

## ನಿಜವಾದ ಗುರು.

ಒಂದು ದಿವಸ ವಾಸುದೇವಪಂಡಿತರು, ತಮ್ಮ ಸಾಲೆಯೊಳಗಿನ ವಿದ್ಯಾರ್ಥಿಗಳನ್ನು ಕೂಡಿಕೊಂಡು ಊರ ಹೊರಗಿನ ಒಂದು ವನದಲ್ಲಿದ್ದ ಗುಹೆಯ ಕಡೆಗೆ ಹೋದರು. ಆ ಗುಹೆಯಲ್ಲಿ ಶ್ರೀ ೧೦೮ **ಶಾಂತಿಸಾಗರ ಮುನಿ**ಮಹಾರಾಜರು ಇದ್ದರು. ಅಲ್ಲಿ ಹೋದ ಬಳಿಕ ಎಲ್ಲರೂ ನಮೋಸ್ತು ಎಂದು ಉಚ್ಚಾರ ಮಾಡಿ ಮಹಾರಾಜರಿಗೆ ಪಂಚಾಂಗ ನಮಸ್ಕಾರವನ್ನು ಹಾಕಿದರು. ಹಾಗೂ ಎದುರಿನಲ್ಲಿ ವಿನಯದಿಂದ ಕುಳಿತುಕೊಂಡರು. ಮುನಿಮಹಾರಾಜರು ಎಲ್ಲರಿಗೂ ಧರ್ಮೋಪದೇಶವನ್ನು ಮಾಡಿದರು.ಅದರ ಸಾರಾಂಶವು- "ನಿಜವಾದ ದೇವರು, ನಿಜವಾದ ಗುರು, ನಿಜವಾದ ಶಾಸ್ತ್ರ ಇವುಗಳ ಮೇಲೆ ನಾವು ನಂಬಿಗೆಯನ್ನಿಡಬೇಕು. ಶ್ರೀ ಅರಿಹಂತ ಭಗವಾನರು ಮಾಡಿದ ಉಪದೇಶವು ಸತ್ಯವದೆ. ಸರ್ವಜ್ಞರೆಂದರೆ ಎಲ್ಲ ಪದಾರ್ಥಗಳನ್ನು ತಿಳಿಯುವವರು. ಅವರಲ್ಲಿ ಯಾವ ದೋಷಗಳೂ

ಇರುವದಿಲ್ಲ. ಅವರೇ ಎಲ್ಲರಿಗೂ ನಿಜವಾದ ಉಪದೇಶವನ್ನು ಮಾಡ ಬಲ್ಲರು. ಅರಿಹಂತರು ಹೇಳಿದ ಧರ್ಮದಂತೆ ನಡೆಯುವ ಮುನಿಗಳೇ ನಮ್ಮ ಗುರುಗಳು. ಅವರು ಬರೆದ ಉಪದೇಶವಿದ್ದ ಗ್ರಂಥಗಳೇ ನಿಜ ವಾದ ಶಾಸ್ತ್ರಗಳು. ಜೀವಿಗಳ ಮೇಲೆ ದಯಮಾಡುವದು, ಸತ್ಯ ಮಾತಾಡುವದು, ಕಳ್ಳತನಮಾಡದಿರುವದು, ಲೋಭವನ್ನು ಕಡಿಮೆ ಮಾಡುವದು, ಎರಡನೇ ಹೆಂಗಸರನ್ನು ಅಕ್ಕತಂಗಿಯರಂತೆ ತಿಳಿಯು ವದು, ದಿನಾಲು ದೇವರ ಪೂಜೆಯನ್ನೂ ಪರೋಪಕಾರವನ್ನೂ ಮಾಡುವದು, ಸತ್ಪಾತ್ರದಲ್ಲಿ ದಾನಕೊಡುವದು–ಹೀಗೆ ಅರಿಹಂತರ ಉಪದೇಶವಿದೆ. ಈ ಉಪದೇಶದಂತೆ ನಡೆಯುವ ಜನರಿಗೆ ಇಹ ಲೋಕದಲ್ಲಿ ಸುಖವೂ ಪರಲೋಕದಲ್ಲಿ ಉತ್ತಮಗತಿಯೂ ಪ್ರಾಪ್ತ ವಾಗುತ್ತವೆ."

ಈ ಪ್ರಕಾರ ಮುನಿಮಹಾರಾಜರ ಉಪದೇಶವನ್ನು ಕೇಳಿ, ಎಲ್ಲರೂ ಆನಂದಿತರಾದರು. ಬಳಿಕ ಹುಡುಗರೂ, ಪಂಡಿತರೂ ಮುನಿ ಗಳನ್ನು ನಮಸ್ಕರಿಸಿ, ಮರಳಿ ಮನೆಗೆ ಬಂದರು.



## ೧೩ನೆಯ ಪಾಠ.

# ನಿಜವಾದ ಗುರು.

( ೨ ನೇ ಭಾಗ. )

ಮರುದಿನ ಶಾಲೆಯಲ್ಲಿ ವಾಸುದೇವಪಂಡಿತರೂ ಮತ್ತು ಎಲ್ಲ ವಿದ್ಯಾರ್ಥಿಗಳೂ ಕೂಡಿದರು. ಆಗ ಒಬ್ಬ ವಿದ್ಯಾರ್ಥಿಯು ಪಂಡಿತ ರಿಗೆ ಪ್ರಶ್ನಮಾಡಹತ್ತಿದನು.

ವಿದ್ಯಾರ್ಥಿಯು:--ನಿನ್ನೆ ನಾವು ಯಾವ ಮುನಿಮಹಾರಾಜರ ದರ್ಶನಕ್ಕೆ ಹೋಗಿದ್ದೆವೋ, ಅವರನ್ನು ನಮಸ್ಕರಿಸುವ ಕಾರಣ ವೇನು ?

ಪಂಡಿತ:--ಅವರು ನಮ್ಮ ಗುರುಗಳು. ನಿರ್ಲೋಭಿಗಳಾಗಿದ್ದಾರೆ. ಅವರು ತಮ್ಮ ಹತ್ತರ ದುಡ್ಡು, ಬಟ್ಟೆ, ಹಾಸಿಗೆ ಹೀಗೆ ಯಾವ ಒಡವೆಯನ್ನೂ ಇಡುವದಿಲ್ಲ. ದಿನಾಲು ಒಂದುವೇಳೆ ಶ್ರಾವಕರ ಮನೆಯಲ್ಲಿ ಶುದ್ಧಭೋಜನವನ್ನು ಮಾಡುತ್ತಾರೆ. ಉಳಿದ ವೇಳೆಯಲ್ಲಿ ಶಾಸ್ತ್ರಗಳ ಅಭ್ಯಾಸವನ್ನು ಮಾಡುತ್ತಾರೆ. ಕೆಲವು ಕಾಲ ಧ್ಯಾನಸ್ಥರಾಗುತ್ತಾರೆ. ಅವರು ಅರಿಹಂತರ ಉಪದೇಶದಂತೆ ಮುನಿಧರ್ಮವನ್ನು ಪಾಲಿಸುತ್ತಾರೆ. ಮೋಕ್ಷಸುಖದ ಮಾರ್ಗವನ್ನು ತೋರಿಸುತ್ತಾರೆ. ಅಂತೇ ನಾವು ಅವರಿಗೆ ಗುರು ಎಂದು ತಿಳಿದುಕೊಳ್ಳಬೇಕು. ಮತ್ತು ಅವರಿಗೆ ವಿನಯಮಾಡಬೇಕೆಂದು ನಾವು ಅವರನ್ನು ನಮಸ್ಕರಿಸಿದೆವು.

ವಿದ್ಯಾರ್ಥಿ:--ಪಂಡಿತರೇ, ತಾವೂ ನಮ್ಮ ಗುರುಗಳಿರುವಿರಿ. ಅವರು ಹೇಗೆ ನಮ್ಮ ಗುರುಗಳು? ನೀವು ಅವರಂತೆ ಕಾಣುವದಿಲ್ಲ.

ಪಂಡಿತ:--ಅವರು ನಮ್ಮ ಧರ್ಮಗುರುಗಳು. ಅವರು ನಮಗೆ ಹೇಳುವ ಧರ್ಮವು ಸತ್ಯೋಪದೇಶವಿರುತ್ತದೆ. ಅದರಲ್ಲಿ ನಮಗೆ ಯಾವ ಸಂಶಯವನ್ನೂ ತೆಗೆಯಲಿಕ್ಕೆ ಬರುವದಿಲ್ಲ. ಒಂದುವೇಳೆ ಶಂಕೆಯನ್ನು ತೆಗೆದರೆ, ಚನ್ನಾಗಿ ಸಮಾಧಾನವನ್ನು ಹೇಳುತ್ತಾರೆ. ಅವರ ಅಭಿಪ್ರಾಯವನ್ನು ನಾವು ಮನ್ನಿಸಲೇಬೇಕು. ವಿದ್ಯೆಯನ್ನು

ಕಲಿಸುವ ನಮ್ಮಂಥವರು ವಿದ್ಯಾಗುರುಗಳು. ವಿದ್ಯಾಗುರುಗಳ ಬಳಿಯಲ್ಲಿ ವಿದ್ಯೆಯನ್ನು ಕಲಿಯಬೇಕು. ವಿದ್ಯೆಕಲಿಯುವಾಗ ಬಂದ ಸಂಶಯಗಳನ್ನು ಗುರುಗಳಿಂದ ಸಮಾಧಾನಪಡಿಸಿಕೊಳ್ಳಬೇಕು.

ವಿದ್ಯಾರ್ಥಿ:—ಧರ್ಮಗುರುಗಳು ನಗ್ನರೇ ಇರುತ್ತಾರೋ?

ಪಂಡಿತ:-- ಹೌದು, ನಗ್ನಮುನಿಗಳೇ ನಿಜವಾದ ಧರ್ಮಗುರುಗಳು. ಅವರ ಹೊರ್ತಾಗಿ ಗೃಹಸ್ಥಾಚಾರ್ಯರೂ ಶ್ರಾವಕರ ಸಲುವಾಗಿ ಧರ್ಮಗುರುಗಳಾಗುತ್ತಾರೆ. ಶ್ರಾವಕಾಚಾರದ ಆಚಾರವನ್ನು ಉತ್ತಮರೀತಿಯಿಂದ ಪಾಲಿಸುತ್ತಾರೆ. ಮತ್ತು ಅಭಿಷೇಕ, ಪೂಜೆ, ಶ್ರಾವಕಾಚಾರ ಮತ್ತು ಕ್ರಿಯೆ ಇವುಗಳ ವಿಷಯವಾಗಿ ಅವರಿಗೆ ವಿಶೇಷ ತಿಳುವಳಿಕೆ ಇರುತ್ತದೆ. ಇವರು ಮೌಂಜೀಬಂಧನ, ನಗ್ನಸಂಸ್ಕಾರ, ಪ್ರತಿಷ್ಠೆ, ಆದಿ ಸಂಸ್ಕಾರಗಳನ್ನು ಮಾಡಿಸುತ್ತಾರೆ.

ವಿದ್ಯಾರ್ಥಿ:--ಇಂದು ನಮಗೆ ನಿಜವಾದ ಗುರುಗಳ ವಿಷಯವಾಗಿ ಎಷ್ಟೋ ಸಂಗತಿಗಳು ತಿಳಿದವು. ಆದರೆ ಸೋಗಿನ ಗುರುಗಳನ್ನು ಹೇಗೆ ಗುರುತಿಸಬೇಕು? ಎಂಬದನ್ನಷ್ಟು ತಿಳಿಸಿ ಹೇಳಿದರೆ ಒಳ್ಳೇದಾಗುವದು.

ಪಂಡಿತ:--ಯಾರು ಬಗೆಬಗೆಯ ವೇಷಗಳನ್ನು ಧರಿಸುವರೋ, ಮೈಗೆ ಬೂದಿಯನ್ನು ಬಡೆದುಕೊಳ್ಳುವರೋ, ಜಡೆಗಳನ್ನು ಬೆಳಿಸುವರೋ, ಕೊಬ್ಬಟಿಗೆಯನ್ನು ಹಾಕಿ ಸುತ್ತಲೂ ಕೂಡುವರೋ, ಮೈಮೇಲೆ ಬಟ್ಟೆಗಳನ್ನು ಧರಿಸುವರೋ, ಅವರೇ ಸೋಗಿನ ಸಾಧುಗಳೆಂದು ತಿಳಿಯಬೇಕು.



# ೧೪ನೆಯ ಪಾಠ.

## ನಾಸ್ತಿಕ ಸಾಧುವು.

ಬನಾರಸದಲ್ಲಿ ವಿಶ್ವಸೇನರಾಜನು ರಾಜ್ಯವಾಳುತ್ತಿದ್ದನು. ಅವನ ಅರಸಿಯ ಹೆಸರು ವಾಮದೇವಿ. ವಾಮದೇವಿಯ ಹೊಟ್ಟೆಯಲ್ಲಿ ಭಗವಾನ್ ಪಾರ್ಶ್ವನಾಥರು ಅವತಾರವನ್ನು ತಾಳಿದರು. ಶ್ರೀಪಾರ್ಶ್ವನಾಥರು ಇಪ್ಪತ್ಮೂರನೆಯ ತೀರ್ಥಂಕರರು. ಒಂದು ದಿನ ಪಾರ್ಶ್ವನಾಥ ಕುಮಾರರು ಆನೆಯ ಮೇಲೆ ಕುಳಿತು, ಅಡ್ಡಾಡಲಿಕ್ಕೆ ಹೋಗಿದ್ದರು. ಆಗ ಜಡೆಯನ್ನು ಬೆಳಿಸಿ, ಪಂಚಾಗ್ನಿಯ ಮಧ್ಯದಲ್ಲಿ ಕುಳಿತಿರುವ ಒಬ್ಬ ಸನ್ಯಾಸಿಯನ್ನು ಕಂಡರು, ಹಾಗೂ



ತನ್ನ ಸೇವಕನಿಗೆ ಇವನು ಯಾರು? ಏನು ಮಾಡುತ್ತಿರುವನು? ಎಂದು ಕೇಳಿದರು.

ಆಗ ಸೇವಕನು--ಪ್ರಭುಗಳೇ, ಇವನು ದೊಡ್ಡ ಯೋಗಿಯಾದ ಸಾಧುವಿರುವನು. ಅವನು ತಪಸ್ಸನ್ನು ಮಾಡುತ್ತಿರುವನು.

ಪಾರ್ಶ್ವ.--ಅಜ್ಞಾನಿಗಳ ತಪವು ಸಂಸಾರವನ್ನು ಬೆಳಿಸಲಿಕ್ಕೆ ಕಾರಣವಾಗುತ್ತದೆ. ಅದರಿಂದ ಮೋಕ್ಷಸುಖವು ಸಿಗುವದಿಲ್ಲ!

ಸೇವ.--ಇವನು ಅಜ್ಞಾನಿಯೇ? ಪಂಚಾಗ್ನಿಯನ್ನು ಹೊತ್ತಿಸಿ ತಪಸ್ಸನ್ನು ಮಾಡುತ್ತಿರುವನು. ತಲೆಯ ಮೇಲೆ ಜಡೆಗಟ್ಟದ ಕೂದಲುಗಳ ಹೊರೆಯೇ ಇರುವದು. ಹೀಗಿದ್ದು ಇವನು ಅಜ್ಞಾನಿಯೇ? ಸೋಜಿಗದ ಮಾತಾಗಿದೆ.

ಪಾರ್ಶ್ವ.--ಪಂಚಾಗ್ನಿಯನ್ನು ಪ್ರಜ್ವಲಿಸಿದರೆ, ದೊಡ್ಡದಾದ ತಪಸ್ಸನ್ನು ಮಾಡಿದಂತಾಗುವದೋ? ಅದರಿಂದ ಹಿಂಸೆಯ ಪಾಪವು ಮಾತ್ರ ಪಾಲಿಗೆ ಬರುತ್ತದೆ. ಹಾಗೆ ಮಾಡುವದರಿಂದ ಎಷ್ಟೋ ಜೀವಗಳ ನಾಶವಾಗುತ್ತದೆ. ತಲೆಯ ಮೇಲೆ ಜಡೆಯನ್ನು ಬೆಳಿಸಿದ್ದರಿಂದಲೂ, ಹಿಂಸೆಯಾಗುತ್ತದೆ. ಹೇನುಗಳಾಗಬಾರದೆಂದು ಅವುಗಳನ್ನು ತೊಳೆಯಲಿಕ್ಕೆ ಬೇಕು. ಮೈಗೆ ಬೂದಿಯನ್ನು ಬಳೆದುಕೊಳ್ಳಬೇಕಾಗುತ್ತದೆ. ಇಂಥವರಿಗೆ ಪಾಖಂಡಿ ಅಂದರೆ ನಾಸ್ತಿಕ ಸಾಧುಗಳೆನ್ನುತ್ತಾರೆ.

ಸನ್ಯಾಸಿಯು ಪಾರ್ಶ್ವನಾಥರ ಈ ಬಗೆಯ ಮಾತುಗಳನ್ನು ಕೇಳಿ, ಕೋಪಿಸಿ, ಅವರನ್ನು ಕುರಿತು--ಎಲೋ ಹುಡುಗಾ, ನೀನು

ನನಗೆ ಪಾಖಂಡಿ ಎಂದು ಯಾಕೆ ನುಡಿಯುವಿ? ಅಜ್ಞಾನಿಯಿರುವೆನೆಂದು ನೀನು ಯಾತರಮೇಲಿಂದ ತಿಳಿದುಕೊಂಡೆ? ಎಂದು ಕೇಳಲು, ಕುಮಾರನು ಸನ್ಯಾಸಿಗೆ ಸರಿಯಾಗಿ ಉತ್ತರ ಕೊಡಬೇಕೆಂದು, ಆನೆಯಿಂದ ಕೆಳಗಿಳಿದು, ಆತನ ಬಳಿಗೆ ಹೋಗಿ-ನೀನು ಜ್ಞಾನಿಯಾಗಿದ್ದರೆ, ಈ ಉರಿಯುವ ಕಟ್ಟಿಗೆಯಲ್ಲಿ ಏನಿರುವದು ಹೇಳು, ಎಂದು ಪ್ರಶ್ನಮಾಡಿದನು.

**ಸನ್ಯಾ.**--ಅದರಲ್ಲಿ ಏನೂ ಇರುವದಿಲ್ಲ.

ಪಾರ್ಶ್ವ.---ಹಾಗಾದರೆ, ನಾನು ಅದನ್ನು ಶೀಳಿ, ಹೋಳು ಮಾಡಿ ನೋಡಲಿ?

ಸನ್ಯಾ.-ಬೇಕಾದಹಾಗೆ ನೋಡಿಕೊಳ್ಳು.

ಸೇವಕನು ಕೂಡಲೆ ಆ ಕಟ್ಟಿಗೆಯನ್ನು ಶೀಳಿದನು. ಅದರಲ್ಲಿ ಎರಡು ಹಾವಿನ ಮರಿಗಳು ಹೊರಟವು. ಅವು ಸಾಯುವ ಸ್ಥಿತಿಯಲ್ಲಿದ್ದವು. ಅದನ್ನು ಕಂಡು ಪಾರ್ಶ್ವನಾಥರು ಅವುಗಳಿಗೆ ಣಮೋಕಾರ ಮಂತ್ರವನ್ನು ಉಪದೇಶಿಸಿದರು. ಅದರ ಪ್ರಭಾವದಿಂದ ಅವು ಸತ್ತ ಮೇಲೆ ಧರಣೇಂದ್ರ ಮತ್ತು ಪದ್ಮಾವತಿಗಳಾಗಿ ಹುಟ್ಟಿ ಬಂದವು. ಈ ಚಮತ್ಕಾರವನ್ನು ನೋಡಿಯಾದರೂ, ಆ ಪಾಖಂಡಿ ಸನ್ಯಾಸಿಯ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಅವನು ಮೊದಲಿನಂತೆ ಸುಳ್ಳು ತಪಸ್ಸನ್ನು ಮಾಡತೊಡಗಿದನು. ಅದರಿಂದ ಅವನಿಗೆ ಮುಂದೆ ಅಧೋಗತಿಯು ಪ್ರಾಪ್ತವಾಯಿತು.

ಪ್ರತಿಯೊಬ್ಬ ತೀರ್ಥಂಕರರಿಗೆ ಹುಟ್ಟಿದಾಗಲೇ, ಮತಿಜ್ಞಾನ ಶ್ರುತಜ್ಞಾನ, ಅವಧಿಜ್ಞಾನ ಈ ಪ್ರಕಾರ ಮೂರುಬಗೆಯ ಜ್ಞಾನಗ

ಳಿರುತ್ತವೆ. ಅಂತೇ ಪಾರ್ಶ್ವನಾಥರಿಗೆ ಆ ಕಟ್ಟಿಗೆಯಲ್ಲಿ ಕಳವಳ ಪಡುತ್ತಿರುವ ಹಾವಿನ ಮರಿಗಳ ಜ್ಞಾನವಾಯಿತು. ನಾಸ್ತಿಕರಿಗೆ ಈ ಸಂಗತಿಗಳು ತಿಳಿಯುವದಿಲ್ಲ.



## ೧೫ನೆಯ ಪಾಠ.

# ಪರೋಪಕಾರ.

## ( ೧ನೆಯ ಭಾಗ )

ರಾಮನೂ ಹರಿಯೂ ಇವರಿಬ್ಬರೂ ಕೂಡಿ, ಒಮ್ಮೆ ತಿರುಗಾಡಲಿಕ್ಕೆ ಹೋಗಿದ್ದರು. ದಾರಿಯಲ್ಲಿ ಒಂದು ಮಾವಿನಗಿಡಕ್ಕೆ ಸುಂದರವಾದ ಹಣ್ಣುಗಳು ಹತ್ತಿದ್ದವು. ಅವುಗಳನ್ನು ನೋಡಿ ಅವರಿಗೆ ಆನಂದವಾಯಿತು. ಆ ಗಿಡದ ಮೇಲೆ ಎಷ್ಟೋ ಗಿಳಿಗಳು ಕುಳಿತಿದ್ದವು. ಅವುಗಳ ಕಡೆಗೆ ಅವರು ನೋಡುತ್ತ ನಿಂತರು. ಅಷ್ಟರಲ್ಲಿ ಯಾರೋ ಒಬ್ಬರು ಕವಣೆಯಿಂದ ಗಿಳಿಗಳ ಕಡೆಗೆ ಕಲ್ಲನ್ನು ಒಗೆದರು. ಅದು ತಾಕಿ, ಒಂದು ಗಿಳಿಯು ಗಾಯವಾಗಿ ಕೆಳಗೆ ಬಿತ್ತು. ಅದನ್ನು ನೋಡಿ ರಾಮನಿಗೆ ಅದರ ಬಗ್ಗೆ ದಯೆಯು ಹುಟ್ಟಿತು. ಅವನು ಅದನ್ನು ಮೆಲ್ಲಗೆ ಎತ್ತಿಕೊಂಡು ತನ್ನ ಹತ್ತರ ತೆಗೆದುಕೊಂಡನು ಹಾಗೂ ಹರಿಯುವ ಹಳ್ಳದ ನೀರನ್ನು ಬೊಗಸೆಯಲ್ಲಿ ತಂದು, ಅದಕ್ಕೆ ಕುಡಿಸಿದನು. ಆವಾಗ ಗಿಳಿಯು ಎಚ್ಚತ್ತು, ಕೆಲಹೊತ್ತಿನ ಮೇಲೆ ಹಾರಿ ಗಿಡದ ಮೇಲೆ ಕುಳಿತಿತು. ಇತ್ತ ರಾಮನೂ ಹರಿಯೂ ಅಲ್ಲೇ ಕುಳಿತುಕೊಂಡರು. ಗಿಡದ ಮೇಲೆ ಅದೇ ಹಾರಿಕುಳಿತ ಗಿಳಿಯ ಸುತ್ತಲು,

ಉಳಿದ ಗಿಳಿಗಳು ನೆರೆದವು; ಹಾಗೇ ಅವು ಹುಡುಗನ ಉಪಕಾರವನ್ನು ನೆನೆದು, ಎರಡು ಉತ್ತಮವಾದ ಮಾವಿನ ಹಣ್ಣುಗಳನ್ನು ಹರಿದು, ಕೆಳಗೆ ಒಗೆದವು. ರಾಮನೂ ಹರಿಯೂ ಅವುಗಳನ್ನು ತಿಂದು ಮನೆಗೆ ಮರಳಿ ಹೋಗಬೇಕೆಂದು ಹೊರಟರು. ದಾರಿಯಲ್ಲಿ ಒಬ್ಬ ಮನುಷ್ಯನು ನೀರಡಿಸಿ ಬಳಲುವದನ್ನು ಅವರು ನೋಡಿದರು. ರಾಮನು ಅದೇ ಕ್ಷಣದಲ್ಲಿ ಹಳ್ಳದ ನೀರನ್ನು ತಂದು, ಅವನಿಗೆ ಕುಡಿಸಿದನು. ಆಗ ಆ ಮನುಷ್ಯನು ಉಚಿತವೆಂದು ತಿಳಿದು, ಅವರಿಗೆ ಒಂದು ರೂಪಾಯಿಯನ್ನು ಕೊಡಹೋದನು. ಆದರೆ ಅವರು ಅದನ್ನು ತೆಗೆದುಕೊಳ್ಳದೆ--ರೂಪಾಯಿಯು ನಿಮ್ಮ ಹತ್ತರವೇ ಇರಲಿ, ಇನಾಮು ಪಡೆಯುವಷ್ಟು ನಾವು ಅದಾವ ದೊಡ್ಡ ಕೆಲಸವನ್ನು ಮಾಡಿರುವೆವು. ಒಬ್ಬರಿಗೊಬ್ಬರು ಉಪಯೋಗೆ ಬೀಳುವದು ಮನುಷ್ಯರ ಕರ್ತವ್ಯವೇ ಆಗಿರುವದು, ಅದನ್ನೇ ನಾವು ಮಾಡಿರುವೆವು.

ಹುಡುಗರ ಈ ಬಗೆಯ ಮಾತುಗಳನ್ನು ಕೇಳಿ, ಆ ಮನುಷ್ಯನು ಬಹಳೇ ಸಂತೋಷಗೊಂಡನು, ಹಾಗೂ ಅವನು ಅವರಿಗೆ ಶುಭಾಶೀರ್ವಾದವನ್ನು ಕೊಟ್ಟನು.

ಈ ದಿನ ವರ್ತಿಸಿದ ಪರೋಪಕಾರದ ಕೆಲಸಗಳಿಂದ ಆ ಹುಡುಗರಿಗೆ ಬಹಳೇ ಆನಂದವಾಯಿತು. ಇಷ್ಟು ಆನಂದವು ಮಾವಿನ ಹಣ್ಣುಗಳನ್ನು ತಿಂದದ್ದರಿಂದಲೂ, ಒಂದು ರೂಪಾಯಿ ಇನಾಮಿನಿಂದಲೂ ಆಗುತ್ತಿದ್ದಿಲ್ಲ.



# ೧೬ನೆಯ ಪಾಠ

# ಜಿನಮಂದಿರವು.

ಸುಮತಿ:-ಗಂಗೂ, ಗುಡಿಗೆ ಹೋಗೋಣ ನಡೆ. ಜಿನೇಶ್ವರರ ದರ್ಶನವನ್ನು ತೆಗೆದುಕೊಳ್ಳುವ ವೇಳೆಯಾಯಿತು.

ಗಂಗು:-ಅವ್ವಾ, ನಾನು ಮಡಿಬಟ್ಟೆಗಳನ್ನು ಉಟ್ಟುಕೊಂಡು ಬರುತ್ತೇನೆ.

ಗಂಗೂ ಇವಳು ಮಡಿಬಟ್ಟೆಗಳನ್ನು ಧರಿಸಿದಳು. ಹಣೆಗೆ ಕುಂಕುಮದ ಬೊಟ್ಟಿಟ್ಟಳು. ಬಳಿಕ ತಾಯಿ-ಮಕ್ಕಳು ಜಿನಮಂದಿರಕ್ಕೆ ಹೋಗಿ, ಜಿನೇಶ್ವರರ ದರ್ಶನವನ್ನು ತೆಗೆದುಕೊಂಡು, ಎದುರಿನಲ್ಲಿ ಕುಳಿತುಕೊಂಡರು. ಆಗ ಮಗಳ ಪ್ರಶ್ನೆಗಳಿಗೆ ಉತ್ತರ ಕೊಡಬೇಕೆಂದು, ಸುಮತಿಯು ಮಂದಿರದಲ್ಲಿರುವ ಒಡವೆಗಳ ವಿಷಯದಲ್ಲಿ ಮಾತಾಡಹತ್ತಿದಳು.

ಗಂಗು.-ಜಿನೇಶ್ವರರ ಪ್ರತಿಮೆಯ ಬಳಿಯಲ್ಲಿ ಇಷ್ಟು ಒಡವೆಗಳನ್ನು ಇಡುವ ಕಾರಣವೇನು? ಅರಿಹಂತರು ವೀತರಾಗರಿರುತ್ತಾರೆ. ಅವರಿಗೆ ಇವೆಲ್ಲ ಒಡವೆಗಳು ಯಾತಕ್ಕೆ ಬೇಕು?

ಸುಮ.-ನೀನನ್ನುವಂತೆ ಅರಿಹಂತರು ವೀತರಾಗರಿರುತ್ತಾರೆ. ಅವರು ಯಾತರ ಮೇಲೂ ಆಶೆಯನ್ನು ಮಾಡುವದಿಲ್ಲ. ಅವರಿಗೆ ತಮ್ಮ ಸುತ್ತಲು ಈ ಬಗೆಯ ಡಂಭಾಚಾರದ ಒಡವೆಗಳು ಬೇಕಾಗುವದಿಲ್ಲ. ಆದರೆ ತೀರ್ಥಂಕರರಿಗೆ ಕೇವಲಜ್ಞಾನವಾಯಿತೆಂದರೆ, ಸ್ವರ್ಗದೊಳಗಿನ ದೇವತೆಗಳು ಬಂದು ಸಮವಸರಣದ ರಚನೆಯನ್ನು

ಮಾಡುತ್ತಾರೆ ಹಾಗೂ ಭಕ್ತಿಯಿಂದ ಪೂಜಿಸುತ್ತಾರೆ. ನಾವು ಅದೇ ಮಾದರಿಯನ್ನು ಅನುಸರಿಸಿ, ಜಿನೇಶ್ವರರ ಸುತ್ತಲು ಶೋಭೆಯನ್ನು ಮಾಡುತ್ತೇವೆ. ಸಮವಸರಣದ ಎಲ್ಲ ಮಾದರಿಯನ್ನು ನಾವು ಮಾಡದಿದ್ದರೂ ಎಂಟು ಪ್ರಾತಿಹಾರ್ಯಗಳ ರಚನೆಯನ್ನಷ್ಟು ಮಾಡುತ್ತೇವೆ. ಪ್ರಾತಿಹಾರ್ಯವೆಂದರೆ ಜಿನೇಶ್ವರನ ವೈಭವವನ್ನು ತೋರಿಸುವ ಸಾಧನವು. ಸಿಂಹಾಸನ, ಅಶೋಕವೃಕ್ಷ, ಮೂರುಛತ್ರ, ಚಾಮರ, ಭಾಮಂಡಲ, ದಿವ್ಯಧ್ವನಿ, ಪುಷ್ಪವೃಷ್ಟಿ ಮತ್ತು ದುಂದುಭಿ ಈ ಪ್ರಕಾರ ಎಂಟು ಪ್ರಾತಿಹಾರ್ಯಗಳಿರುತ್ತವೆ.

ಗಂಗು.--ವೀತರಾಗ ಮೂರ್ತಿಯ ಬಳಿಯಲ್ಲಿ ಪದ್ಮಾವತಿ ಹಾಗೂ ಕ್ಷೇತ್ರಪಾಲರ ಮೂರ್ತಿಗಳನ್ನು ಏಕೆ ಇಟ್ಟಿರುವರು ?

ಸುಮ.-ಈ ಅರಿಹಂತರ ಪ್ರತಿಮೆಗಳ ಹತ್ತಿರಿರುವ ದೇವತೆಗಳು ಜಿನೇಂದ್ರಭಕ್ತರು ಮತ್ತು ಜಿನಶಾಸನದ ರಕ್ಷಕರು ಇರುತ್ತಾರೆ. ಅಂತೇ ಸಮವಸರಣದಲ್ಲಿ ಇಂದ್ರನು ಇವರ ಯೋಜನೆಯನ್ನು ಈ ಕೆಲಸಗಳ ಮೇಲೆ ಮಾಡಿರುವನು. ನಾವು ಅವರನ್ನು ಅರಿಹಂತ ದೇವರಂತೆ ಭಾವಿಸಕೂಡದು ಮತ್ತು ಅವರ ಹೆಸರಿನಿಂದ ಹರಿಕೆಯನ್ನಾದರೂ ಹೊರಬಾರದು.

ಗಂಗು.-ಈ ಜಿನೇಶ್ವರರ ಪ್ರತಿಮೆಯ ಹತ್ತರ ಇರುವ ಪಾದುಕೆಗಳು ಯಾರವು ?

ಸುಮತಿ.-ಅವು ಗುರುಗಳ ಪಾದುಕೆಗಳಿರುವವು. ದೇವ, ಗುರು ಮತ್ತು ಶಾಸ್ತ್ರ ಇವುಗಳ ಪೂಜೆಯನ್ನು ಶ್ರಾವಕರು ದಿನಾಲು

ಮಾಡಬೇಕು. ಅದುಕಾರಣ ಮಂದಿರದಲ್ಲಿ ಗುರುಗಳ ಪಾದುಕೆಗಳನ್ನು ಇಟ್ಟಿರುತ್ತಾರೆ. ಶ್ರುತ ಅಂದರೆ ಶಾಸ್ತ್ರ. ಇದರ ಬದಲಾಗಿ ಮಂದಿರ ದಲ್ಲಿ ಶ್ರುತಸ್ಕಂಧಯಂತ್ರವು ಇರುತ್ತದೆ. ಈ ಯಂತ್ರದ ಮೇಲೆ ಹನ್ನೆ ರಡು ಅಂಗಗಳ ಹೆಸರುಗಳನ್ನು ಬರೆದಿರುತ್ತಾರೆ. ಜಿನೇಶ್ವರನ ಪ್ರತಿ ಮೆಯ ಬಳಿಯಲ್ಲಿ ಇಷ್ಟು ಸಾಹಿತ್ಯವಿರುತ್ತದೆ. ಈ ಪ್ರಕಾರ ಸಾಹಿ ತ್ಯಗಳನ್ನಿಡುವದು ಜೈನ ಧರ್ಮದ ಹೆಗ್ಗುರುತಾಗಿರುತ್ತದೆ.

ಗಂಗು.--ಅವ್ವಾ, ದಿನಾಲು ನಾನೂ ನಿನ್ನ ಗೂಡ ಮಂದಿರಕ್ಕೆ ಬರುವೆನು. ನನಗೆ ಎಲ್ಲ ವಿಷಯಗಳನ್ನು ತಿಳಿಸಿಕೊಡುತ್ತ ಹೋಗು. ಅಂದರೆ ನೆಟ್ಟಗಾಗುವದು.



## ೧೭ನೆಯ ಪಾಠ

# ಕರುಣಾಷ್ಟಕವು.

“ ಆನಂದಾಚಾ ಕಂದ ” ಎಂಬಂತೆ



ತ್ರಿಭುವನ ಪತಿಯೇ। ಜಿನೇಂದ್ರಮಣಿಯೇ ಮುಕ್ತಿದಾತನೇ ಕರುಣಾಕರನೇ। ವೈಭವನಿತ್ತು ಜನನಮರಣವನು ಪರಿಹರಿಸುವದೈ ದೇವನೇ ॥ ೧ ॥ ಭವಸಾಗರದೊಳು ಬೆಂದೆನು ನೊಂದೆನು ಕಂದನ ಪಾಲಿಸು ಭಯಾಹರಾ। ಜವದಲಿ ಕೃಪೆಯಂ ಮಾಡುತ ತಪ್ಪಿಸು ಈ ಘನಪಾಶಾ ಸಂಸಾರಾ ॥ ೨ ॥ ಪ್ರಪಂಚಪಾಶವು ವಿಷಸಮ ವೆಮಗೆ ಪರಿಣಮಿಸುವದೈ ಅಭಯಕರಾ। ತಾಪವ ಹರಿಸಲು ಕೋಪ

ರಹಿತನೇ ಬಲವಾಗಿರುವಿ ಕೃಪಾಕರಾ ॥ ೩ ॥ ಜಿನ ಗುರು ನೀನೇ ಭವ ರಕ್ಷಿತನೇ  ಜಿನ ಕುಲಪ್ರಭುವೇ  ಜಿನೇಂದ್ರನೆ । ಘನಮೋಹವು ಗಡ ಭ್ರಾಂತಿಗೊಳಿಪುದು  ಕಾವುದು  ನನ್ನನು ಭವೇಶನೇ ॥ ೪ ॥ ಅರಿಷಡ್ವರ್ಗವು  ಅರಿದು ಕೊಲುತಿವೆ  ಪಾಲಿಸೆನ್ನನು  ಪರಾತ್ಪರಾ । ಕರುಣಾನಿಧಿಯೇ  ದುರಿತವ ಹರಿಸುತ  ಕಾಪಾಡುವದೈ  ಗುಣಾಗರಾ ॥ ೫ ॥ ಜಿನೇಂದ್ರ  ಪ್ರಭುವೇ  ಪದಯುಗಲವನು  ಪರಿಪರಿಯಿಂದಲಿ  ಪೂಜಿಪೆನು । ಅಣುಗನ  ಮೊರೆಯನು  ಮನದೊಳು  ತಂದು  ಮುನದಣಿ ಕೊಡು ಸೌಖ್ಯವನು ॥ ೬ ॥ ನಿಗಮದ ಮೂಲವೇ ಪೊಗಳಲು ನಾನು ತಗೆಬಗೆಗೊಳಿಪೆನು  ಸುಧೀರನೇ । ಅಗೆಹರಪ್ರಭುವೇ  ಸುತನ  ಸ್ತುತಿಯನು ಗೃಹಿಸುವುದೈ ಭವನಾಶನೇ ॥೭॥ ಅನುರಾಗದೊಳು ಮೂಜಗ ರಕ್ಷಿತ ಷಡ್ಗುಣರಹಿತನೆ ಶುಭೇಶನೆ । ಮನ್ನಿಸಿ  ನೀನು ಶರಣಾಗತರನ್ನು ರಕ್ಷಿಸು ರಕ್ಷಿಸು ಜಿನೇಶನೇ  ॥ ೮ ॥



## ೧೮ನೆಯ ಪಾಠ.

# ಮಹಾರಾಕ್ಷಸ ವಿದ್ಯಾಧರ.

### ಪೂಜೆಯ ಕೆಲಸಕ್ಕೆ ಅನುಮೋದನವು.



ಲಂಕಾಪಟ್ಟಣದಲ್ಲಿ ರಾಕ್ಷಸಕುಲದೊಳಗೆ ಜನ್ಮ ತಾಳಿದ ಮಹಾರಾಕ್ಷಸ ಎಂಬ ಹೆಸರಿನ ರಾಜನು ರಾಜ್ಯವಾಳುತ್ತಿದ್ದನು. ಅವನು ಒಂದು ದಿವಸ ಮನೋಹರವಾದ ಒಂದು ಉದ್ಯಾನದಲ್ಲಿ ಜಲಕ್ರೀಡೆಯನ್ನಾಡಬೇಕೆಂದು ಹೋದನು. ಆ ಉದ್ಯಾನದಲ್ಲಿ ಒಂದು ಸರೋವರವಿತ್ತು. ಆ ಸರೋವರದಲ್ಲಿ ಎಷ್ಟೋ ಕಮಲಗಳಿದ್ದವು. ಅಲ್ಲಿ ಒಂದು ಕಮಲದೊಳಗೆ ಸತ್ತು ಬಿದ್ದ ಗುಂಗೀಹುಳವು ಆ ಅರಸನ ಕಣ್ಣಿಗೆ ಬಿತ್ತು. ಆಗ ಅವನಿಗೆ ವೈರಾಗ್ಯವು ಉತ್ಪನ್ನವಾಯಿತು. ಅಷ್ಟರಲ್ಲಿ ಒಬ್ಬ ಮುನಿಗಳು ಅಲ್ಲಿಗೆ ಬಂದರು. ಅವ

ರನ್ನು ನೋಡಿ ಅರಸನು ನಮಸ್ಕಾರ ಮಾಡಿ--ಭೋ ಮುನೀಶ್ವರರೇ, ನನಗೆ ದೊರೆತ ರಾಜವೈಭವವು ಯಾವ ಪುಣ್ಯಕರ್ಮದಿಂದ ಉಂಟಾಗಿದೆ? ಎಂಬದನ್ನು ದಯಮಾಡಿ ಹೇಳಬೇಕು ಎಂದು ಬೇಡಿಕೊಂಡನು. ಆಗ ಮುನಿಗಳು–" ಈ ಭರತಖಂಡದಲ್ಲಿ ಸುರಮ್ಯ ಎಂಬ ಹೆಸರಿನ ದೇಶವಿತ್ತು. ಅದರ ಹಿರಿಯೂರು ಪೋದನಪುರ ಎಂಬದಾಗಿತ್ತು. ಅಲ್ಲಿ ಭದ್ರಪರಿಣಾಮಿಗಳಾದ ನೀವು ಇರುತ್ತಿದ್ದಿರಿ. ನೀವು ಪೂಜೆಮಾಡುತ್ತಿರುವ ಅರಸನಿಗೆ ಅವನ ಕೆಲಸದಲ್ಲಿ ಅನುಮೋದನವನ್ನು ಕೊಟ್ಟರಿ. ಅದರಿಂದ ನಿಮಗೆ ಎಷ್ಟೋ ಪುಣ್ಯ ಬಂಧವಾಯಿತು. ಆ ಪುಣ್ಯದ ಯೋಗದಿಂದ ನೀವು ಸತ್ತಮೇಲೆ ಯಕ್ಷದೇವತೆಯಾದಿರಿ. ಒಂದಾನೊಂದು ದಿವಸ ಪುಂಡರೀಕವನದಲ್ಲಿ ದಾವಾಗ್ನಿಯ ಮೂಲಕ ಮುನಿಸಂಘಕ್ಕೆ ಉಪಸರ್ಗವಾಗಹತ್ತಲು, ನೀವು ಅದನ್ನು ನಾಶಗೊಳಿಸಿದಿರಿ. ಮುಂದೆ ನಿಮ್ಮ ಆಯುಷ್ಯವು ತೀರಿ, ನೀವು ಸತ್ತಮೇಲೆ ಪುಷ್ಕಲಾವತೀ ದೇಶದೊಳಗಿನ ವಿಜಯಾರ್ಧದ ಮೇಲಿರುವ ವಿದ್ಯಾಧರನಾದ ತಡಿಲ್ಲಂಘ ಹಾಗೂ ರಾಣಿ ಶ್ರೀಪ್ರಭಾ ಇವರ ಹೊಟ್ಟೆಯಲ್ಲಿ ನೀವು ಮುದಿತ ಎಂಬ ಹೆಸರಿನ ಮಗನಾಗಿ ಹುಟ್ಟಿದಿರಿ; ಮತ್ತು ತೀವ್ರವೇ ಮುನಿದೀಕ್ಷೆಯನ್ನು ತೆಗೆದುಕೊಂಡಿರಿ. ಒಂದು ದಿವಸ ಮುನಿ ಅವಸ್ಥೆಯಲ್ಲಿ ಅಮರವಿಕ್ರಮ ವಿದ್ಯಾಧರನ ವಿಭೂತಿಯನ್ನು ನೋಡಿ ನಿದಾನವನ್ನು ಕಟ್ಟಿದಿರಿ; ಮತ್ತು ಮರಣಸಮಯದಲ್ಲಿ ಸಮಾಧಿಮರಣವನ್ನು ಸಾಧಿಸಿ ಸ್ವರ್ಗದಲ್ಲಿ ಸನತ್ಕುಮಾರ ದೇವತೆಯಾದಿರಿ. ಬಳಿಕ

ಅಲ್ಲಿಂದ ಆಯುಷ್ಯವು ಪೂರ್ಣವಾದ ಮೇಲೆ ನೀವು ಮಹಾ ರಾಕ್ಷಸರಾಜರಾದಿರಿ."

ಅರಸನು ಈ ಪ್ರಕಾರ ತನ್ನ ಭವಾಂತರವನ್ನು ಕೇಳಿ, ಅಮರ ರಾಕ್ಷಸ ಮತ್ತು ಭಾನುರಾಕ್ಷಸ ಎಂಬ ಮಕ್ಕಳಿಗೆ ಅರಸೊತ್ತಿಗೆ ಯನ್ನು ಒಪ್ಪಿಸಿ, ತಾನು ಮುನಿದೀಕ್ಷೆಯನ್ನು ತೆಗೆದುಕೊಂಡನು. ಮತ್ತು ಕೊನೆಗೆ ಮೋಕ್ಷವನ್ನು ಹೊಂದಿದನು. ಸಾರಾಂಶ:-ಪೂಜನ ಕೃತ್ಯಕ್ಕೆ ಅನುಮೋದನ ಕೊಡುವ ಮಹಾರಾಕ್ಷಸ ವಿದ್ಯಾಧರನಿಗೆ ಪರಂಪರೆಯಿಂದ ಮೋಕ್ಷಸುಖವು ದೊರೆಯಿತು. ಅಂದಮೇಲೆ ಯಾವಾಗಲೂ ಜಿನೇಶ್ವರರನ್ನು ಅಷ್ಟದ್ರುವ್ಯಗಳಿಂದ ಪೂಜಿಸುವವ ರಿಗೆ ಅದು ಸಿಗಲಾರದೆ? ಅತ್ಯವಶ್ಯವಾಗಿ ಸಿಗುವದು.



## ೧೯ನೆಯ ಪಾಠ.

# ದಂತಿಕುಮಾರನ ಪೂರ್ವಭವ.

ಒಂದು ದೇಶದಲ್ಲಿ ಬಗೆಬಗೆಯ ವೃಕ್ಷಗಳಿಂದ ಯುಕ್ತವೂ ಭಯಂಕರವೂ ಆದ ಒಂದು ದಾರುಣವೆಂಬ ಹೆಸರಿನ ಅರಣ್ಯವಿತ್ತು. ಆ ವನದಲ್ಲಿ ಸುಧರ್ಮನೆಂಬ ಹೆಸರುಳ್ಳ ಒಬ್ಬ ಮುನಿಯು ತಪಸ್ಸು ಮಾಡುತ್ತ ಶುದ್ಧ ಆತ್ಮಜ್ಞಾನವನ್ನು ಪಡೆದಿದ್ದನು. ಅದೇ ಅರಣ್ಯದಲ್ಲಿ ದಾರುಣಮಿಲನೆಂಬ ಹೆಸರಿನ ವನದೇವನು ಇರು ತ್ತಿದ್ದನು. ಅವನು ಕೆಲವೊಂದು ಕಾರಣದ ಸಲುವಾಗಿ ಮುನಿ ಮಹಾರಾಜರಿರುವದನ್ನು ತಿಳಿಯದೆ, ಆ ವನಕ್ಕೆ ಬೆಂಕಿ ಇಟ್ಟನು.

ಸ್ವಲ್ಪಾವಕಾಶದಲ್ಲಿ ನಾಲ್ಕೂ ಕಡೆಗೆ ಜ್ವಾಲೆಗಳು ಹಬ್ಬಿದವು. ಅದರಿಂದ ಆ ಮುನಿಮಹಾರಾಜರು ಸುಟ್ಟು ಬೂದಿಯಾದರು, ಹಾಗೂ ಅಚ್ಯುತ ಸ್ವರ್ಗದಲ್ಲಿ ದೇವರಾಗಿ ಜನ್ಮತಾಳಿದರು.



ವನರಕ್ಷಕ ದೇವನು ಅಗ್ನಿಯು ಶಾಂತವಾದ ಬಳಿಕ ಅರಣ್ಯದಲ್ಲಿ ಅಡ್ಡಾಡುವಾಗ ಮುನಿಮಹಾರಾಜರ ಎಲುವಿನ ಪಂಜರವು ಆತನ ಕಣ್ಣಿಗೆ ಬಿತ್ತು. ಆಗ ಅವನು ಬಹಳೇ ಹಳಹಳಿಸಿದನು. ಮೇಲಿಂದ ಮೇಲೆ ತನ್ನನ್ನು ತಾನೇ ಆಡಿಕೊಳ್ಳಹತ್ತಿದನು. ಮತ್ತು ತನ್ನಲ್ಲಿ ತಾನೇ ನುಡಿದನು:-ಪವಿತ್ರ ಚಾರಿತ್ರವುಳ್ಳ ಹಾಗೂ ತಪೋನಿಧಿಗಳಾದ ಮುನಿವರ್ಯರನ್ನು ನಾನು ಸುಟ್ಟುಬಿಟ್ಟೆನು. ಅಕಟ

ಕಟಾ! ನನಗೆ ಧಿಕ್ಕಾರವಿರಲಿ! ನನಗಿಂತ ಹೆಚ್ಚಿನ ಪಾಪಿಷ್ಠನು ಈ ಜಗತ್ತಿನಲ್ಲಿ ಅದಾವನಿರುವನು? ಹೀಗೆ ವಿಷಾದಪಡುತ್ತ ದಿನ ಗಳೆಯಹತ್ತಿದನು. ಅವನ ಆಯುಷ್ಯವು ತೀರಿದ್ದರಿಂದ ಅವನು ಆನೆಯಾಗಿ ಅದೇ ಅರಣ್ಯದಲ್ಲಿ ಹುಟ್ಟಬಂದನು.

ಮುಂದೆ ಕೆಲವು ದಿವಸಗಳ ತರುವಾಯ ಒಂದು ದಿವಸ ಅಚ್ಯುತ ಸ್ವರ್ಗದೊಳಗಿನ ಮುನಿವರ್ಯರ ಜೀವವು ಅಷ್ಟಾಹ್ನಿಕ ಪರ್ವದಲ್ಲಿ ನಂದೀಶ್ವರ ಪರ್ವತದ ಮೇಲಿನ ಜಿನಮಂದಿರದ ದರ್ಶನಕ್ಕಾಗಿ ಹೊರಟಿತು. ದಾರಿಯಿಂದ ಹೋಗುತ್ತಿರಲು, ಆ ಆನೆಯು ಅದರ ಕಣ್ಣಿಗೆ ಬಿತ್ತು. ಅವಧಿಜ್ಞಾನದ ಯೋಗದಿಂದ ಮುನಿಜೀವಕ್ಕೆ ತನ್ನ ಮುನಿಯ ಅವಸ್ಥೆಯ ಸ್ಮರಣವಾಯಿತು. ಅದು ತನ್ನ ಪುಷ್ಕರ ವಿಮಾನದೊಳಗಿಂದ ಕೆಳಗಿಳಿದು ಅದೇ ವನ ದಲ್ಲಿ ಮೊದಲಿನಂತೆ ಧ್ಯಾನಮಾಡುತ್ತ ಕುಳಿತುಕೊಂಡಿತು. ಆನೆಯು ಅದನ್ನು ಕಂಡ ಕೂಡಲೇ, ಅದಕ್ಕೆ ತನ್ನ ಜಾತಿಸ್ಮರಣವಾಗಿ ಕಣ್ಣೀರು ಉದುರಹತ್ತಿದವು. ಪೂರ್ವಭವದಲ್ಲಿ ಮಾಡಿದ ಕೃತ್ಯ ಕ್ಕಾಗಿ ಅದಕ್ಕೆ ಪಶ್ಚಾತ್ತಾಪವಾಗಹತ್ತಿತು. ಅದು ತನ್ನನ್ನು ತಾನೇ ಆಡಿಕೊಳ್ಳುತ್ತ ಆ ಜೀವರೂಪೀ ದೇವತೆಗೆ ನಮುಸ್ಕಾರ ಮಾಡಿತು. ದೇವತೆಯ ಉಪದೇಶದಿಂದ ಆನೆಯು ಸಮ್ಯಗ್ದರ್ಶನಪೂರ್ವಕ ಶ್ರಾವಕನ ವ್ರತಗಳನ್ನು ಧಾರಣಮಾಡಿತು. ಬಳಿಕ ಆ ದೇವತೆಯು ಅಲ್ಲಿಂದ ಹೊರಟುಹೋಯಿತು. ಇತ್ತ ಆನೆಯು ನೀರು, ಒಣ ಹುಲ್ಲು, ಹಣ್ಣುಗಳನ್ನು ತಿಂದು, ದಿನಗಳೆಯಹತ್ತಿತು. ಆಯು

ಷ್ಯದ ಕೊನೆಗೆ ಅದು ಸಮಾಧಿಮರಣವನ್ನು ಸಾಧಿಸಿ, ಸತ್ತು ಹೋಯಿತು. ಅದರಿಂದ ಅದು ಸಹಸ್ರಾರಸ್ವರ್ಗದಲ್ಲಿ ದೇವತೆಯಾಯಿತು. ಅಲ್ಲಿ ಬಗೆಬಗೆಯ ಸುಖಗಳನ್ನು ಭೋಗಿಸಿತು. ಅದು ಸಮ್ಯಕ್‌ದೃಷ್ಟಿಯಾಗಿದ್ದದರಿಂದ ಯಾವಾಗಲೂ ಜಿನಪೂಜೆಯನ್ನು ಮಾಡಿ, ಧರ್ಮಸಾಧನವನ್ನು ಮಾಡುತ್ತಿತ್ತು. ಆ ಆನೆಯು ಆಯುಷ್ಯವು ತೀರಿದ ಬಳಿಕ ಮರಣಹೊಂದಿ ಶ್ರೇಣಿಕರಾಜನಿಗೆ ದಂತಿಕುಮಾರನೆಂಬ ಹೆಸರಿನ ಮಗನಾಗಿ ಹೊಸ ಜನ್ಮವನ್ನು ತಾಳಿತು.

ಸಾರಾಂಶ–ಈ ಕಥೆಯ ಮುಖ್ಯ ಗುಟ್ಟು ಏನಂದರೆ, ತನ್ನ ಕೈಯಿಂದ ಅಪ್ಪಿತಪ್ಪಿ ಕೆಟ್ಟಕೆಲಸವು ಆದರೂ ಆ ಬಗ್ಗೆ ಮನಸಿನಲ್ಲಿ ಪಶ್ಚಾತ್ತಾಪವಾಯಿತೆಂದರೆ, ಅದರಿಂದಲೂ ಎಷ್ಟೋ ಲಾಭವಾಗುತ್ತದೆ.



## ೨೦ನೆಯ ಪಾಠ.

## ಉಪದೇಶ.

ಜಿನಧರ್ಮಿಯರೇ ಪರಮೇಷ್ಠಿಯನು ಪೂಜಿಸಿ, ವಿನಯವ ಮಾಳ್ಪುದೈ।
ಘನದರ್ಶನಬೋಧಚರಿತ್ರವ ತಿಳಿಯಲು ನೀವು ಹೆಣಗುವದೈ ॥ ೧ ॥
ವಿನಯದಿಂದಲಿ ದರ್ಶನಜ್ಞಾನವು ಚರಿತ್ರೆಯು ತಪವು ಆಗುವುದೈ ।
ಮನ್ನಣೆಯಿಂದಲಿ ಮೋಕ್ಷದ್ವಾರವು ಬುಧಜನರಿಗೆ ಅದು
ತೆರೆಯುವದೈ ॥ ೨ ॥

ದಾನವ ಮಾಡಿರಿ ಸತ್ಪಾತ್ರದೊಳು ಶಕ್ತಿಗೆ ತೆರದೆ ಗೃಹಸ್ಥರೇ ।
ದಾನವ ಮಾಡದೆ ಬಾಳುವ ಮನುಜಗೆ ಹಾನಿಯಾಗುವದು
ಸಜ್ಜನರೇ ॥ ೩ ॥
ನಿರ್ಗ್ರಂಥರಿಗೆ ಚತುರ್ವಿಧ ದಾನವ ಕೊಡದಂತಹ ಕಡುಮನುಜರಿಗೆ ।
ಹರಿಯದಂಥ ಬಿಗಿಯಾದ ಪಾಶಗಳು ಮನೆಮಾರುಗಳು ಸರ್ವರಿಗೆ
॥ ೪ ॥
ಮುನಿಗಳಿಗಾಹಾರೌಷಧ ಶಾಸ್ತ್ರಾಭಯದಾನಗಳ ಕೊಡುವವರು ।
ಘನಸೌಖ್ಯವನು ಮನದಣಿ ಪಡೆವರು ಗೃಹದೊಳು ಅವರೇ ಧನ್ಯರು
॥ ೫ ॥
ತನ್ನೊಳು ಬಲವು ಇರುತಿರಲವರು ದಾನ ಮಾಡರು ಭಕ್ತಿಯಲಿ ।
ತನ್ನಯ ಕರದಿಂ ಛೇದಿಸುತಿಹರು ಸ್ವರ್ಗಸುಖವನು ಜಾವದಲಿ ॥೬॥
ದಾನವ ಮಾಡದ ಹೀನಮನುಜನು ಕೂಡುತ ಕಲ್ಲಿನ ನಾವೆಯೊಳು ।
ಮನ್ನಣೆ ಇಲ್ಲದೆ, ಮುಳುಗುತಲಿಹನು ಮುಂಗಾಣದೆ ಅಬ್ಧಿಯೊಳು
॥ ೭ ॥
ಮಮತೆಯು ದೋರದ ಜಿನಮತ ಜನರಿಗೆ ಅತಿಶಯ ಪಾಪವು
ಘಟಿಸುವದೈ ।
ಧರ್ಮಕೆ ವಿಮುಖರು ಆಗುವರವರು ಕಾರಣ ಮಮತೆಯ
ಮಾಳ್ಪುದೈ ॥ ೮ ॥
ಮನದೊಳು ಜಿನಗಳ ಉಪದೇಶವನು ಪ್ರೇಮದಿಂದಲಿ ತಾಳುವದೈ ।
ಘನದಯೆಯನು ತೋರದ ಜನರಿಗೆ ಧರ್ಮವು ಹೇಗೆ ಆಗುವದೈ ॥೯॥

ಧರ್ಮವೃಕ್ಷದ ಮೂಲವು ವ್ರತವು ಅದರೊಳ್ ದಾನವು ಮುಖ್ಯವು।
ಮರ್ಮತಿಳಿಯದೆ, ಚರ್ಮತೊಳೆದರೆ, ಆಗುವದೇನದು ಧರ್ಮವು
॥ ೧೦ ॥

ಗುಣಗಳ ಸಮುಹವು ನರರೊಳು ನೆಲಿಪವು ಜೀವದಯಾವ್ರತದಿಂದಲಿ।
ದಿನಮಣಿತೆರದೆ ಪೊಳೆವನು ಮನುಜನು ಬೋಧವ ತಾಳಿರಿ
ಹೃದಯದಲಿ ॥ ೧೧ ॥



## ೨೧ನೆಯ ಪಾಠ.

## ಕಣ್ಣು ತೆರೆದವು.

ಒಬ್ಬ ಮನುಷ್ಯನು ಬಹಳೇ ದುಂದುಗಾರನಿದ್ದನು. ಅವನ ಇರವು ಒಳ್ಳೇ ಒಣಪಿನದಾಗಿತ್ತು. ಅವನು ತನ್ನ ಮಗನ ಮದುವೆಯನ್ನು ಸಾಲವನ್ನು ತಂದು ಒಳ್ಳೇ ವೈಭವದಿಂದ ಮಾಡಿದನು. ಬಜೆಂತ್ರಿಗಾರರು, ನಗಾರಿನೌಬತ್ತುಗಾರರು ಮೊದಲಾದವರ ಸಂದಣಿಯಾಗಿತ್ತು. ಅವನು ತನ್ನ ಆಪ್ತೇಷ್ಟರಿಗೂ ಬಂಧುಬಳಗದವರಿಗೂ ಗುರುತಿನವರಿಗೂ ಗುರುತಿಲ್ಲದ ಗ್ರಾಮಾಧಿಕಾರಿಗಳಿಗೂ ಸಹ ಊಟಕ್ಕೆ ಹೇಳಿದ್ದನು. ಸವಿಯೂಟಗಳ ಸಂಭ್ರಮವು ಬಹಳೇ ಆಯಿತು. ಅದರಿಂದ ಆ ಕಾಲಕ್ಕೆ ಎಲ್ಲರೂ ಆತನನ್ನು ಹೊಗಳಹತ್ತಿದರು. ಮುಂದೆ ತಂದ ಸಾಲವು ತೀರದಂತಾಯಿತು. ಸಾವುಕಾರನಂತೂ ಹಣವನ್ನು ಒಂದೇಸವನೆ ಬೇಡಹತ್ತಿದನು. ಆಗ ಅವನು ಮನೆಮಾರುಗಳನ್ನೂ ಮನೆಯೊಳಗಿನ ಅರಿವೆ, ಅಂಚಡಿ ಮೊದಲಾದ

ಬೆಲೆಯುಳ್ಳ ಪದಾರ್ಥಗಳನ್ನೂ ಮಾರಿದರೂ ಸಾಲ ತೀರಿಸುವಷ್ಟು ಹಣವು ಕೂಡಲಿಲ್ಲ. ಕೊನೆಗೆ ಕಡಿಮೆಬಿದ್ದಷ್ಟು ಹಣವನ್ನು ತನ್ನ ಆಪ್ತೇಷ್ಟರ ಕಡೆಯಿಂದಲೂ ತನ್ನನ್ನು ಹೊಗಳಿದವರ ಕಡೆಯಿಂದಲೂ ಇಸುಕೊಂಡು ಬಂದು, ಸಾಲವನ್ನು ತೀರಿಸಿಬಿಡಬೇಕೆಂದು ಯೋಚಿಸಿ, ಅವರನ್ನು ಕೇಳಿದನು. ಅವರು ಏನಾದರೊಂದು ಕಾರಣವನ್ನು ಹೇಳಿ, ನಮ್ಮ ಹತ್ತರ ಹಣವಿದ್ದರೆ, ಆನಂದದಿಂದ ಕೊಡುತ್ತಿದ್ದೆವು ಎಂದು ಬಣ್ಣದ ಮಾತುಗಳನ್ನಾಡಿದರು. ಅವನ ಗೆಳೆಯನೊಬ್ಬನು ಅವನಿಗೆ ಸ್ಫುಟವಾಗಿ ಹೇಳಿದ್ದೇನಂದರೆ–'ಹಾಸಿಗೆ ನೋಡಿ ಕಾಲು ಚಾಚಬೇಕು' ಎಂಬಂತೆ ನೀನು ನಡೆಯದ್ದರಿಂದ ಈ ಗೋಳಿಗೆ ಗುರಿಯಾಗಿರುವಿ. ಈಗ ನಿನ್ನ ಸ್ವಂತದ ಮನೆಮಾರುಗಳೂ ಇಲ್ಲ, ಬೆಳ್ಳಿ ಬಂಗಾರದ ಒಡವೆಗಳೂ ಇಲ್ಲ, ನಿನಗೆ ಸಾಲವನ್ನು ಹೇಗೆ ಕೊಡಬೇಕು? ಹೀಗೆ ನುಡಿದನು. ಆ ಮಾತುಗಳನ್ನು ಕೇಳಿ, ಆ ದುಂದುಗಾರನ ಮನಸ್ಸಿಗೆ ಬಹಳ ವಿಷಾದವಾಯಿತು. ಅವನು ಮನಸ್ಸಿನಲ್ಲಿ–ಜನರಿಂದ ಹೊಗಳಿಸಿಕೊಳ್ಳಬೇಕೆಂದು ನಾನು ಮನಬಂದಂತೆ ವೆಚ್ಚಮಾಡಿದೆನು. ಇದು ನನ್ನಿಂದ ದೊಡ್ಡ ತಪ್ಪಾಯಿತು, ಹೀಗೆ ಅಂದುಕೊಂಡನು. ಹಾಗೂ ಅವನ ಕಣ್ಣುಗಳು ಚನ್ನಾಗಿ ತೆರೆದವು. ಅವನು ಅಂದಿನಿಂದ ಹೀಗೆ ನಿಶ್ಚಯಮಾಡಿದನು:—

'ಜನರು ಏನೇ ಅನ್ನಲಿ! ಅವರ ಮಾತನ್ನು ಲಕ್ಷಿಸದೆ, ತನಗೆ ಸರಿಕಂಡದ್ದನ್ನೇ ಮಾಡಬೇಕು. ನಾನೂ ಹೀಗೆಯೇ ಇನ್ನುಮುಂದೆ ನಡೆಯತಕ್ಕವನು.'

ಮೇಲೆ ಹೇಳಿದಂತೆ ನಿಶ್ಚಯಮಾಡಿ ಅವನು ನಡೆಯಹತ್ತಿದ್ದರಿಂದ ತುಸು ದಿವಸಗಳಲ್ಲಿಯೇ ಉಳಿದ ಸಾಲವನ್ನು ತೀರಿಸಿ, ಸುಖದಿಂದ ಇರಹತ್ತಿದನು. ಅವನು ಹಗಲೆಲ್ಲ ಅನ್ನುತ್ತಿರುವ ಪದ್ಯವು ಸ್ವಾರಸ್ಯವುಳ್ಳದ್ದರಿಂದ ಅದನ್ನು ಇದರಡಿಯಲ್ಲಿ ಕೊಟ್ಟದೆ.

ಕಂದ|| ನೆಂಟರು ಬಂಟರು ದುಡ್ಡಿನ |
ಗಂಟಿರುತನಕೆಲ್ಲ ಹೇಳಿದಂದದಿ ನಡೆವರ್ ||
ಗಂಟೆಲ್ಲ ತೀರ್ದ ಮರುದಿನ |
ನೆಂಟರೇ ಗಂಟಲಿಗೆ ಗಾಣ ಕವಿಕುಲರತ್ನಾ || ೧ ||



## ೨೨ನೆಯ ಪಾಠ

## ಪರೋಪಕಾರವು.

ಮುರಲೀಧರನೆಂಬ ಹೆಸರಿನ ಒಬ್ಬ ಮರಾಠಾ ಜಾತಿಯ ಗೃಹಸ್ಥನ ಹೊಲದಲ್ಲಿ ಒಂದು ಹಾವಿನ ಹೋರು ಇತ್ತು. ಅದರಲ್ಲಿ ಒಂದು ಹಾವು ಇರುತ್ತಿತ್ತು. ಒಂದಾನೊಂದು ದಿವಸ ಒಂದು ಮುದಿ ಹದ್ದು ಹೋರಿನ ಬಾಯಿಯ ಹತ್ತರವೇ ಬಂದು ಕೂತಿತು. ಅಷ್ಟರಲ್ಲಿ ಹಾವು ತನ್ನ ಮೋರೆಯನ್ನು ಹೊರಗೆ ತೆಗೆದು ಆ ಹದ್ದಿನ ಕಾಲುಗಳನ್ನು ಗಟ್ಟಿಯಾಗಿ ಹಿಡಿಯಿತು. ಹಾವು ಅದನ್ನು ಎಳೆಯಲಿಕ್ಕೆ ಹತ್ತಿತು. ಹದ್ದು ಮಾತ್ರ ಮೇಲಕ್ಕೆ ಹಾರುವ ಯತ್ನಮಾಡಹತ್ತಿತು. ಈ ಪ್ರಕಾರ ಪರಸ್ಪರರಲ್ಲಿ ಎಳೆದಾಟವು ನಡೆದಿರಲು, ಆ ಒಕ್ಕಲಿಗನ ಹುಡುಗನ ಲಕ್ಷ್ಯವು ಅತ್ತಕಡೆಗೆ ಹೋಯಿತು. ಆ ಹೊತ್ತಿನಲ್ಲಿ ಅವನು ಇನ್ನುಮೇಲೆ ಹದ್ದು

ಸಾಯಬಹುದೆಂದು ತಿಳಿದು, ಒಂದು ಮಣ್ಣಿನ ಹೆಂಟೆಯನ್ನು ತಕ್ಕೊಂಡು ಹಾವಿನ ಹೆಡೆಯ ಮೇಲೆ ಒಗೆದನು. ಅದರಿಂದ ಅದರ ಬಾಯಿಯು ತೆರೆಯಿತು. ಹಾಗೂ ಹದ್ದಿನ ಕಾಲುಗಳು ಅದರ ಬಾಯೊಳಗಿಂದ ಜಾರಿದವು. ಕೂಡಲೇ ಆ ಹದ್ದು ಹಾರಿ ಹೋಯಿತು. ತನ್ನ ಕೈಯೊಳಗೆ ಸಿಕ್ಕ ಬೇಟೆಯು ಹೋಯಿತೆಂದು ತಿಳಿದು ಆ ಹಾವಿಗೆ ಸಿಟ್ಟು ಬಂತು.

ಕೆಲವು ದಿವಸಗಳ ಮೇಲೆ ಆ ಹಾವು ಹೊರಬಿದ್ದು ಹೋಗುತ್ತಿರುವಾಗ ಒಕ್ಕಲಿಗನ ಮಗನು ಅದರ ದೃಷ್ಟಿಗೆ ಬಿದ್ದನು. ಆಗ ಮನಸಿನೊಳಗೆ ಡಂಕು ಹಿಡಿದು ಹಾವು ಆ ಹುಡುಗನನ್ನು ಹಿಂಬಾಲಿಸಿತು. ಹುಡುಗನು ಮುಂದೆ, ಹಾಗೂ ಹಾವು ಹಿಂದೆ! ಹೀಗೆ ಓಡ ಓಡುತ್ತ ಹುಡುಗನು ದಣಿದು ಹೋದನು. ಇನ್ನುಮೇಲೆ ಹಾವಿನ ಕೈಯಲ್ಲಿ ಸಿಗತಕ್ಕವನು! ಅಷ್ಟರಲ್ಲಿ ಯಾವ ಹದ್ದಿನ ಪ್ರಾಣವನ್ನು ಉಳಿಸಿದ್ದನೋ ಆ ಹದ್ದು ಅಲ್ಲಿಗೆ ಬಂತು. ಹಾಗೂ ಅದು ಆ ಹಾವಿನ ಬಾಲನ್ನು ಬಾಯಲ್ಲಿ ಹಿಡಿದು, ಗರಗರನೆ ತಿರುಗಿಸಿ ದೂರ ಒಗೆದು ಬಿಟ್ಟಿತು. ಇತ್ತಕಡೆಗೆ ಆ ಹುಡುಗನು ನಿಶ್ಚಿಂತನಾಗಿ ತನ್ನ ಮನೆಗೆ ಹೊರಟುಹೋದನು.

ಸಾರಾಂಶ–ಹುಡುಗನು ಹದ್ದಿನ ಪ್ರಾಣವನ್ನು ಉಳಿಸಿದ್ದನು. ಅದರ ಪ್ರತಿಫಲವೆಂದು ಆ ಹದ್ದು ಆ ಹುಡುಗನ ಪ್ರಾಣವನ್ನು ಉಳಿಸಿತು. ನಿರಿಚ್ಛಬುದ್ಧಿಯಿಂದ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವು ತೀವ್ರವೇ ಆಗುತ್ತದೆಂಬದರಲ್ಲಿ ಸಂದೇಹವಿಲ್ಲ.



## ೨೩ನೆಯ ಪಾಠ.

# ಹೆಚ್ಚಿಗೆ ಶುದ್ಧರು ಯಾರು?

ಒಂದು ನದಿಯ ದಂಡೆಗೆ ಒಂದು ಮಾವಿನ ಗಿಡವಿತ್ತು. ಅದರ ಮೇಲೆ ಒಂದು ಗಿಳಿಯು ಕುಳಿತಿತ್ತು. ಅದು ಹಸಕು ಕಾಯಿಗಳನ್ನು ಚುಂಚುವಿನಿಂದ ಕೆದರಿಕೊಂಡು ತಿನ್ನುತ್ತಿತ್ತು. ಆ ಗಿಡದ ಕೆಳನುಗ್ಗ ಲಲ್ಲಿಯೇ ಒಂದು ನದಿಯು ಹರಿಯುತ್ತಿತ್ತು. ಆ ನದಿಯೊಳಗಿನದೊಂದು ನೀರಗೋಳಿಯು ನೀರಲ್ಲಿ ಮುಳುಗಿ ಎದ್ದು, ನದಿಯ ತಳದೊಳಗಿನ ಕೆಸರಿನಲ್ಲಿಯ ಹುಳಗಳನ್ನೂ, ಮೀನಗಳನ್ನೂ ತಿನ್ನುತ್ತಿತ್ತು. ಒಮ್ಮೆ ನೀರಗೋಳಿಯು ಮುಳುಗಿ ಮೇಲೆ ಬಂದ ಮೇಲೆ ಅದರ ದೃಷ್ಟಿಯು ಸಹಜವಾಗಿ ಗಿಳಿಯ ಕಡೆಗೆ ಹೋಯಿತು. ಆಗ ಅದು ಗಿಳಿಗೆ—ನೀನು ಎಷ್ಟು ಹೊಲಸಾಗಿರುವಿ? ಜಳಕಮಾಡಿದ ಹೊರತು ಹಣ್ಣುಗಳನ್ನು ತಿನ್ನುತ್ತಿರುವಿ. ನಾನು ನೋಡು, ಜಳಕ ಮಾಡಿದ ಹೊರತು ಯಾವದನ್ನೂ ತಿನ್ನುವದಿಲ್ಲ. ಅದರ ಈ ಮಾತುಗಳನ್ನು ಕೇಳಿ ಗಿಳಿಯು ನಕ್ಕು–ಅಣ್ಣಾ, ನೀನನ್ನುವದೇ ನಿಜವು. ನಾನು ಕೇಳುವದೇನಂದರೆ–ನೀನು ಸ್ವಚ್ಛತೆಯ ಸಲುವಾಗಿ ಜಳಕ ಮಾಡುತ್ತೀಯೋ? ಅಥವಾ ನೀರಲ್ಲಿ ಮುಳುಗಿದ ಹೊರತು ನಿನಗೆ ತಿನ್ನಲಿಕ್ಕೆ ಸಿಗುವದಿಲ್ಲೆಂದು ಮಾಡುತ್ತೀಯೊ! ಜಳಕಮಾಡಿ ಹೊಲಸಾದ ಹುಳಗಳನ್ನೂ ಮೀನಗಳನ್ನೂ ತಿನ್ನುವದಕ್ಕಿಂತ ಮೋರೆ ತೊಳಕೊಳ್ಳದೆ ಇದ್ದ ನಾನು ಈ ಸ್ವಚ್ಛವಾದ ಮಾವಿನ ಹಣ್ಣು ತಿನ್ನುತ್ತೇನೆ. ಅಂದಬಳಿಕ ನೀನು ಹೆಚ್ಚು ಶುದ್ಧನೋ! ಅಥವಾ ನಾನು ಹೆಚ್ಚು

ಶುದ್ಧನೊ! ಅದನ್ನು ಹೇಳು ನೋಡೋಣ. ಹೀಗೆ ಅನ್ನಲು ನೀರಗೋಳಿಗೆ ಏನೂ ಉತ್ತರ ಕೊಡಲಿಕ್ಕೆ ತೋಚಲಿಲ್ಲ. ಅದಕ್ಕೆ ಸುಮ್ಮನೆ ಕೂಡ್ರಬೇಕಾಯಿತು.

ಬಾಲಕರೇ! ಈ ಕಥೆಯಿಂದ ನೀವು ಅವಶ್ಯವಾಗಿ ಲಕ್ಷ್ಯದಲ್ಲಿಡತಕ್ಕದ್ದೇನಂದರೆ–ಸಾಮಾನ್ಯ ಪಕ್ಷಿಯಾದ ಗಿಳಿ ಮತ್ತು ನೀರಗೋಳಿ ಇವೆರಡರ ನಡುವೆ ಮಾವಿನಹಣ್ಣು ತಿನ್ನುವ ಗಿಳಿಯೇ ನಿಮಗೆ ಯೋಗ್ಯವಾಗಿ ತೋರುತ್ತದೆ. ನೀವು ಉತ್ತಮ ಜಾತಿಯೊಳಗಿನ ಜನರು. ನಿಮ್ಮ ಆಹಾರವು ಧಾನ್ಯ, ಕಾಯಿಪಲ್ಲೆ ಹಾಗೂ ಹಣ್ಣು ಇವೇ ಆಗಿರುವದರಿಂದ ಇವನ್ನೇ ನೀವು ಸೇವಿಸಲಿಕ್ಕೆ ಬೇಕು. ಮಾಂಸಾಹಾರವನ್ನು ಮಾಡುವದು ನಿಮಗೆ ಯೋಗ್ಯವಲ್ಲ.



## ೨೪ನೆಯ ಪಾಠ.

# ಮಾಂಸಭಕ್ಷಣದ ಪಾಪವು.

ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಮತ್ತು ಪಂಚೇಂದ್ರಿಯ ಜೀವಗಳ ಶರೀರದ ಮೇಲಿನ ತಿಳಲಿಗೆ ಮಾಂಸವೆನ್ನುತ್ತಾರೆ. ಏಕೇಂದ್ರಿಯ ಜೀವವುಳ್ಳ ಶರೀರದ ತಿಳಲಿಗೆ ಮಾಂಸವೆನ್ನುವದಿಲ್ಲ. ಮತ್ತು ಅದಕ್ಕೆ ಮಾಂಸರೂಪವೂ ಇರುವದಿಲ್ಲ. ಯಾಕಂದರೆ, ಏಕೇಂದ್ರಿಯ ಜೀವದ ಶರೀರದಲ್ಲಿ ರಕ್ತ, ಮಾಂಸ, ನೆಣ ಮೊದಲಾದ ಕೊಳೆಯುವ ಪದಾರ್ಥಗಳಿರುವದಿಲ್ಲ. ದ್ವೀಂದ್ರಿ

ಯ ಜೀವಗಳ ಶರೀರವನ್ನು ಸುಡುವದರಿಂದ ದುರ್ಗಂಧವು ಹುಟ್ಟುವಂತೆ ಏಕೇಂದ್ರಿಯ ಜೀವದ ಶರೀರದಿಂದ ಹುಟ್ಟು ವದಿಲ್ಲ.

ಪ್ರತಿಯೊಂದು ಕ್ಷಣದಲ್ಲಿ ಮಾಂಸದೊಳಗೆ ಜೀವಗಳು ಉತ್ಪನ್ನವಾಗುತ್ತವೆ. ಕೆಲವು ಜೀವಗಳು ಕಣ್ಣಿಗೆ ಕಾಣುತ್ತವೆ. ಬೇರೆ ಕೆಲವು ಜೀವಗಳು ಕಣ್ಣಿಗೆ ಕಾಣಿಸದಷ್ಟು ಸೂಕ್ಷ್ಮವಾಗಿರುತ್ತವೆ. ಈ ಸೂಕ್ಷ್ಮಜೀವಗಳೇ ಹಗಲೆಲ್ಲ ಹುಟ್ಟುತ್ತವೆ. ಜೀವವಧೆ ಮಾಡದೆ ಮಾಂಸವು ದೊರೆಯುವದಿಲ್ಲ. ಇದರ ಮೇಲಿಂದ ಮಾಂಸ ತಿನ್ನುವದು ಜೀವಹಿಂಸೆಗೆ ಕಾರಣವಿದ್ದಂತಾಯಿತು. ಮಾಂಸ ತಿನ್ನುವವನು ಮಹಾಪಾಪಿಯೂ ಕೊಲೆಗಡಕನೂ ಆಗಿರುತ್ತಾನೆ. ಮಾಂಸ ಭಕ್ಷಣದ ತ್ಯಾಗವನ್ನು ಮಾಡಿದವನು ಹುಳಹತ್ತಿದ ಧಾನ್ಯ, ಬಹಳ ದಿವಸಗಳವರೆಗೆ ಇಟ್ಟ ತಿನ್ನುವ ಜೀನಸುಗಳು, ರುಚಿಗೆಟ್ಟ ಪದಾರ್ಥಗಳು, ಜೀವದ ಉತ್ಪತ್ತಿಯಾಗುವ ಜೀನಸುಗಳು ಬೆಣ್ಣೆ ಮುಂತಾದ ಅಭಕ್ಷ್ಯ ಪದಾರ್ಥಗಳನ್ನು ತಿನ್ನಬಾರದು. ಅದರಂತೆ ಸೋಸದೆ ಇದ್ದ ನೀರನ್ನೂ ಕುಡಿಯಬಾರದು. ಅನ್ನನೀರುಗಳನ್ನು ನೋಡದಲೆ ತಿನ್ನಬಾರದು. ರಾತ್ರಿಯಲ್ಲಿ ಅನ್ನನೀರುಗಳನ್ನು ತೆಗೆದುಕೊಳ್ಳಬಾರದು. ಯಾಕಂದರೆ ಆ ಕಾಲಕ್ಕೆ ಜೀವಹಿಂಸೆಯಾಗುವ ಸಂಭವವು ಹೆಚ್ಚಿರುತ್ತದೆ.

ಮಾಂಸವನ್ನು ತಿನ್ನತಕ್ಕ ಮನುಷ್ಯನ ಸ್ವಭಾವವು ಕ್ರೂರವೂ ಸಿಟ್ಟನದೂ, ನಿರ್ದಯವೂ ಆಗುತ್ತದೆ. ಜ್ಞಾನತಂತು

ಗಳಲ್ಲಿ ಸ್ತಬ್ಧತೆಯು ಬರುತ್ತದೆ. ಮಾಂಸಾಹಾರಿಗಳಿಗಿಂತ ವನಸ್ಪತ್ಯಾಹಾರಿಗಳ ಬುದ್ಧಿಯು ಚುರುಕಾಗಿರುತ್ತದೆ. ಮಾಂಸ ತಿನ್ನುವದು ಮನುಷ್ಯನಿಗೆ ಯೋಗ್ಯವಲ್ಲ. ಆದ್ದರಿಂದ ಸುವಿಚಾರಿಗಳಾದವರು ಮಾಂಸವನ್ನು ತಿನ್ನುವದಿಲ್ಲ.



## ೨೫ನೆಯ ಪಾಠ

# ಮಾಂಸ ತಿನ್ನುವವನ ಕಥೆ.

ಈ ಭರತಕ್ಷೇತ್ರದಲ್ಲಿ ಬಹು ಸೊಬಗಾದ ಕಾಂಪಿಲ ಎಂಬ ಹೆಸರಿನ ಒಂದು ಪಟ್ಟಣವಿತ್ತು. ಅಲ್ಲಿಯ ಅರಸನು ಭೀಮನು. ನಂದೀಶ್ವರ ಪರ್ವವು ಸಮೀಪಿಸಲು, ರಾಜನು ತನ್ನ ರಾಜ್ಯದಲ್ಲಿ- ' ನಂದೀಶ್ವರವ್ರತವು ಪೂರ್ಣವಾಗುವವರೆಗೆ ನನ್ನ ರಾಜ್ಯದಲ್ಲಿ ಜೀವವಧೆಯನ್ನು ಮಾಡಬಾರದು. ಅದರಂತೆಯೇ ಮಾಂಸವನ್ನಾದರೂ ತಿನ್ನಬಾರದು. ಈ ಕಟ್ಟಳೆಗೆ ವಿರುದ್ಧವಾಗಿ ನಡೆದವನು ದಂಡಕ್ಕೆ ಪಾತ್ರನಾಗುವನು ' ಎಂದು ಡಂಗುರವನ್ನು ಹೊಯ್ಸಿದನು. ಅರಸನ ಈ ಬಗೆಯ ಕಟ್ಟಪ್ಪಣೆಯನ್ನು ಕೇಳಿ, ಎಲ್ಲ ಪ್ರಜೆಗಳು ಎಂಟು ದಿವಸಗಳವರೆಗೆ ಹಿಂಸೆಯನ್ನು ಮಾಡಬಾರದಾಗಿ ಗೊತ್ತು ಮಾಡಿದರು. ಆದರೆ, ಅರಸನು ಸ್ವತಃ ಮಹಾಪಾಪಿಯೂ, ಕಾಡು ವ್ಯಸನಗಳಿಂದ ಕೂಡಿದವನೂ ಆಗಿದ್ದನು. ಅವನು ಒಂದು ದಿವಸ ಸಹ ಮಾಂಸವನ್ನು ತಿನ್ನದೆ ಇರುತ್ತಿರಲಿಲ್ಲ. ಅರಸನ ಅಪ್ಪಣೆ

ಯಾದ್ದರಿಂದ ರಾಜ್ಯದಲ್ಲಿ ಎಲ್ಲಿಯೂ ಮಾಂಸವು ಸಿಗುವಂತೆ ಇದ್ದಿಲ್ಲ. ಒಂದು ದಿವಸ ರಾಜನಿಗೆ ಮಾಂಸವು ದೊರೆಯಲಿಲ್ಲ. ಅದು ಕಾರಣ ಅವನು ಊಟಮಾಡಲಿಲ್ಲ. ಅವನು ತನ್ನ ಅಡಿಗೆಯವನಿಗೆ:- ಬೇಕಾದ ಶ್ರಮವನ್ನು ಮಾಡಿ ನನ್ನ ಸಲುವಾಗಿ ಮಾಂಸವನ್ನು ತೆಗೆದುಕೊಂಡು ಬಾ; ಮತ್ತು ಅಡಿಗೆಯನ್ನು ಮಾಡು. ಅಂದರೆ ನಾನು ಪ್ರಸನ್ನನಾಗುವೆನು ಹಾಗೂ ನಿನಗೆ ಬಹಳ ದ್ರವ್ಯವನ್ನಾದರೂ ಕೊಡುವೆನು, ಹೀಗೆ ನುಡಿದನು. ಅಡಿಗೆಯವನು ರಾಜನ ಅಪ್ಪಣೆಯನ್ನು ಕೇಳಿ, ಅವಸರದಿಂದ ಸ್ಮಶಾನಕ್ಕೆ ಹೋಗಿ ಅಲ್ಲಿಂದ ಒಂದು ಅದೇ ಸತ್ತ ಬಾಲಕನನ್ನು ತೆಗೆದುಕೊಂಡು ಬಂದನು ಹಾಗೂ ಅವನ್ನು ಚನ್ನಾಗಿ ಬೇಯಿಸಿ, ಅರಸನಿಗೆ ನೀಡಿದನು. ಆ ದಿನ ಅರಸನು ಮನುಷ್ಯನ ಮಾಂಸವನ್ನು ತಿಂದು ಸಂತೋಷಬಟ್ಟನು. ಈ ಬಗೆಯ ಮಾಂಸವನ್ನೇ ತರುತ್ತಿರು ಎಂದು ಅಡಿಗೆಯವನಿಗೆ ಹೇಳಿದನು. ಆ ದುಷ್ಟ ಅಡಿಗೆಯವನು ಹಣದಾಶೆಯಿಂದ ಒಂದು ಹಂಚಿಕೆಯನ್ನು ತೆಗೆದನು. ಅವನು ಮೊದಲು ಈ ಅರಮನೆಯಲ್ಲಿ ಮಿಠಾಯಿಯನ್ನು ಹಂಚಲು ಆರಂಭಿಸಿದನು. ಮಿಠಾಯಿಯನ್ನು ತಗೊಳ್ಳಲು, ಚಿಕ್ಕ ಚಿಕ್ಕ ಬಾಲಕರು ಬರಹತ್ತಿದರು. ಅವರಲ್ಲಿ ಎಲ್ಲಕ್ಕೂ ಹಿಂದುಳಿದವನನ್ನು ಕೊಂದು, ಅವನ ಮಾಂಸವನ್ನು ಅರಸನಿಗೆ ತಿನ್ನಲಿಕ್ಕೆ ಕೊಡಹತ್ತಿದನು. ಈ ಕೆಟ್ಟ ಕೆಲಸವು ಪಟ್ಟಣದೊಳಗಿನ ಜನರಿಗೆಲ್ಲ ಎರಡೇ ದಿವಸಗಳಲ್ಲಿ ತಿಳಿಯಿತು. ಅದರಿಂದ ಅವರು ರಾಜನ ಮೇಲೆ ಸಿಟ್ಟಾಗಿ ಅವನನ್ನು ಅವಮಾನಿಸಿ ರಾಜ್ಯದಿಂದ ಹೊರ ದೂಡಿ ಬಿಟ್ಟರು.

ಆ ಪಾಪಿಯಾದ ರಾಜನು ರಾಜ್ಯದೊಳಗಿಂದ ದೂಡಲ್ಪಟ್ಟ ಮೇಲೆ ಒಂದು ಭಯಂಕರವಾದ ಅರಣ್ಯವನ್ನು ಸೇರಿದನು. ಅಲ್ಲಿಯ ಕ್ರೂರಮೃಗಗಳು ಅವನನ್ನು ಕೊಂದು ತಿಂದವು. ಅವನಿಗೆ ನರಕವು ಪ್ರಾಪ್ತವಾಯಿತು. ಅಲ್ಲಿ ಅವನು ಬಹಳ ದಿವಸಗಳವರೆಗೆ ದುಃಖವನ್ನು ಅನುಭವಿಸಿದನು. ಈ ಕಥೆಯ ಮೇಲಿಂದ ಮಾಂಸಭಕ್ಷಕರಿಗೆ ಬಹಳ ಪಾಪವು ಬರುತ್ತದೆ. ಅಲ್ಲದೆ, ಅವರಿಗೆ ದುಃಖವನ್ನಾದರೂ ಭೋಗಿಸಬೇಕಾಗುತ್ತದೆ. ಈ ಮಾತು ಕನ್ನಡಿಯಂತೆ ಒಡೆದು ಕಾಣುತ್ತದೆ.



## ೨೬ನೆಯ ಪಾಠ.

## ಆಹಾರದಾನದ ಆರಂಭ.

ಶ್ರೀಆದಿನಾಥಭಗವಾನರು ದೀಕ್ಷೆಯನ್ನು ತೆಗೆದುಕೊಂಡನಂತರ ಆರು ತಿಂಗಳುಗಳವರೆಗೆ ಒಂದೇ ಸವನೇ ಧ್ಯಾನಸ್ಥರಾಗಿ ಕುಳಿತಿದ್ದರು. ಮುಂದೆ ಒಂದು ದಿವಸ ಅವರು ಆಹಾರಕ್ಕಾಗಿ ಹೊರಟರು. ಆ ಕಾಲಕ್ಕೆ ಜನರಿಗೆ ದಾನದ ವಿಧಿಯು ಗೊತ್ತಿಲ್ಲದ್ದರಿಂದ ಅವರಿಗೆ ಆಹಾರವು ದೊರೆಯಲಿಲ್ಲ. ಆರು ತಿಂಗಳುಗಳವರೆಗೆ ಹೀಗೇ ಆಯಿತು. ಶರೀರದಲ್ಲಿ ಶಕ್ತಿಯು ಉಳಿಯಬೇಕೆಂದೂ ಆಹಾರದ ವಿಧಿಯು ಜನರಿಗೆ ಗೊತ್ತಾಗಬೇಕೆಂದೂ ಅವರು ಆಹಾರವನ್ನು ತೆಗೆದುಕೊಳ್ಳಲು ಹೊರಡುತ್ತಿದ್ದರು.

ಅವರು ತಿರುಗುತ್ತ -ತಿರುಗುತ್ತ ಒಮ್ಮೆ ಹಸ್ತಿನಾಪುರ ಪಟ್ಟಣದ ಹತ್ತರ ಬಂದರು.

ಹಸ್ತಿನಾಪುರದಲ್ಲಿ ಸೋಮಪ್ರಭರಾಜನು ಆಳುತ್ತಿದ್ದನು. ಅವನ ತಮ್ಮನ ಹೆಸರು ಶ್ರೇಯಾಂಸ ಎಂಬದಾಗಿತ್ತು. ಆ ಶ್ರೇಯಾಂಸ ನಿಗೆ ಆ ಹೊತ್ತು ಬೆಳಗಿನ ಜಾವದಲ್ಲಿ ಏಳು ಕನಸುಗಳು ಬಿದ್ದವು. ಮೊದಲನೇ ಕನಸಿನಲ್ಲಿ ಮೇರುಪರ್ವತವನ್ನೂ ಎರಡನೆಯದರಲ್ಲಿ ಕಲ್ಪವೃಕ್ಷವನ್ನೂ ನೋಡಿದನು. ಮೂರನೆಯದರಲ್ಲಿ ಸಿಂಹವನ್ನೂ ನಾಲ್ಕನೇ ಕನಸಿನಲ್ಲಿ ಎತ್ತನ್ನೂ, ಐದನೆಯದರಲ್ಲಿ ಸೂರ್ಯ ಚಂದ್ರರನ್ನೂ ನೋಡಿದನು. ಆರನೆಯದರಲ್ಲಿ ಸಮುದ್ರವನ್ನೂ ಏಳನೆಯದರಲ್ಲಿ ಮಂಗಲದ್ರವ್ಯಗಳನ್ನು ಧರಿಸಿದ ವ್ಯಂತರ ದೇವರ ಮೂರ್ತಿಗಳನ್ನೂ ನೋಡಿದನು. ಮುಂಜಾನೆ ನಿದ್ರೆಯಿಂದ ಎದ್ದ ಮೇಲೆ ಅವನು ತನ್ನ ಅಣ್ಣನಾದ ಸೋಮಪ್ರಭನಿಗೆ ಏಳೂ ಕನಸುಗಳನ್ನು ಹೇಳಿದನು. ಆಗ ಪುರೋಹಿತನು ಹತ್ತರದಲ್ಲಿಯೇ ಇದ್ದನು. ಅವನು ಸ್ವಪ್ನದ ಫಲವನ್ನು ಹೇಳಹತ್ತಿದನು. ಮೊದ ಲನೇ ಕನಸು ಜನ್ಮಕಾಲಕ್ಕೆ ಯಾರ ಅಭಿಷೇಕವು ಮೇರುಪರ್ವತದ ಮೇಲೆ ಆಗಿರುವದೋ ಆ ಆದಿನಾಥ ಭಗವಾನರು ಇಂದು ನಮ್ಮ ಮನೆಗೆ ಬರುವರು ಎಂದು ಸೂಚಿಸುತ್ತದೆ. ಉಳಿದ ಸ್ವಪ್ನಗಳಿಂದ ಆ ಭಗವಂತರಲ್ಲಿ ಒಳ್ಳೇ ಗುಣಗಳು ಬಹಳಿರುವದರಿಂದ ಅವರಿಗೆ ಒಪ್ಪುವಂತೆ ಅವರ ವಿನಯವನ್ನು ಮಾಡುವದರಿಂದ ನಮಗೆ ಬಹಳ ಪುಣ್ಯವು ಬಂದೀತು ಎಂದು ಹೇಳಿದನು.

ಹೀಗೆ ಬಹಳ ಹೊತ್ತಿನ ವರೆಗೆ ವಿಚಾರಮಾಡುತ್ತ ಕುಳಿತಿರಲು, ಶ್ರೀಆದಿನಾಥ ಭಗವಂತರು ಅರಮನೆಯ ಕಡೆಗೆ ಬರುತ್ತಿರುವ ಸುದ್ದಿಯನ್ನು ಕಾವಲುಗಾರನು ಹೇಳಿದನು. ಈ ಸುದ್ದಿಯನ್ನು ಕೇಳಿದಕೂಡಲೇ ಅವರು ಭಕ್ತಿಯಿಂದ ಹೊರಗೆ ಬಂದರು. ಆಗ ಅಂಗಳದಲ್ಲಿ ಭಗವಾನ ಆದಿನಾಥರು ಅವರಿಗೆ ಕಾಣಿಸಿದರು. ಆಗ ಅಣ್ಣತಮ್ಮಂದಿರಿಬ್ಬರೂ ನಮ್ರರಾಗಿ ಅವರ ಪಾದಗಳ ಮೇಲೆ ತಲೆಯಿಟ್ಟರು. ಅವರ ಸುತ್ತಲು ಮೂರು ಪ್ರದಕ್ಷಿಣೆಗಳನ್ನು ಹಾಕಿ ಅರ್ಘ್ಯವನ್ನು ಕೊಟ್ಟರು. ಶ್ರೀ ಆದಿನಾಥ ಭಗವಂತರನ್ನು ನೋಡಿದ ಕೂಡಲೇ ಶ್ರೇಯಾಂಸ ರಾಜನಿಗೆ ಜಾತಿಸ್ಮರಣವಾಯಿತು. ಪೂರ್ವಜನ್ಮದಲ್ಲಿ ಆದಿನಾಥ ಸ್ವಾಮಿಗಳ ಜೀವವು ವಜ್ರಜಂಘ ಎಂಬ ಹೆಸರಿನ ರಾಜನದಾಗಿತ್ತು. ಮತ್ತು ಶ್ರೇಯಾಂಸ ರಾಜನ ಜೀವವು ಶ್ರೀಮತಿ ಎಂಬ ಹೆಸರಿನ ರಾಣಿಯದಾಗಿತ್ತು. ಇಬ್ಬರೂ ಕೂಡಿ ಚಾರಣಮುನಿಗಳಿಗೆ ಆಹಾರವನ್ನು ಕೊಟ್ಟಿದ್ದರು. ಆ ಕಾಲದ ಆಹಾರವಿಧಿಯು ಇವರ ನೆನಪಿಗೆ ಬಂದು ಶ್ರೇಯಾಂಸ ರಾಜನು ಒಂಭತ್ತು ಪ್ರಕಾರದ ಭಕ್ತಿಯಿಂದ ಕಬ್ಬಿನ ಹಾಲಿನ ಆಹಾರವನ್ನು ಅವರಿಗೆ ಕೊಟ್ಟನು. ಆಗ ಅರಮನೆಯಲ್ಲಿ ದೇವತೆಗಳು ರತ್ನ ಮತ್ತು ಪುಷ್ಪಗಳ ಮಳೆಗರೆದರು. ದೇವರ ನಗಾರಿ ನೌಬತ್ತುಗಳು ಬಾರಿಸಹತ್ತಿದವು. ಸುಗಂಧವೂ ಶೀತಲವೂ ಆದ ಗಾಳಿಯು ಬೀಸಹತ್ತಿತು ಮತ್ತು ದೇವತೆಗಳು ಜಯಜಯಕಾರವನ್ನು ಮಾಡಿದರು. ಅಂದಿನಿಂದ ಜನರಲ್ಲಿ ಆಹಾರದಾನವು ಪ್ರಾರಂಭವಾಯಿತು. ಆ ದಿನ ವೈಶಾಖ ಶುದ್ಧ ತೃತೀಯೆಯಾಗಿತ್ತು.

ಅಂತೇ ಆ ತಿಥಿಗೆ ಅಕ್ಷಯತೃತೀಯೆ ಅನ್ನುತ್ತಾರೆ. ಆಹೊತ್ತು ಕಬ್ಬಿನ ಹಾಲಿನಿಂದ ಜೈನರು ಶ್ರೀಆದಿನಾಥ ಭಗವಂತನ ಮೇಲೆ ಅಭಿಷೇಕವನ್ನೂ ಪೂಜೆಯನ್ನೂ ಮಾಡುತ್ತಾರೆ.



## ೨೭ನೆಯ ಪಾಠ.

# ದಾನದ ವಿಧಿ.

ಪ್ರತಿಯೊಬ್ಬ ಶ್ರಾವಕನು ದಿನಾಲು, ಸಾಧು ಜನರು ಆಹಾರಕ್ಕಾಗಿ ಬರುವ ವೇಳೆಯಲ್ಲಿ ಬಾಗಿಲಲ್ಲಿ ನಿಂತು ಮೂರುನಾಲ್ಕು ಗಳಿಗೆ ಹಾದಿಯನ್ನು ನೋಡಬೇಕು. ಸಮ್ಯಕ್‌ದರ್ಶನ ಸಹಿತರಾಗಿ, ಶೀಲವನ್ನು ಪಾಲಿಸುವವರಿಗೆ ಪಾತ್ರರೆನ್ನುತ್ತಾರೆ. ಮಹಾವ್ರತವನ್ನು ಪಾಲಿಸುವ ಮುನಿಗಳು ಉತ್ತಮ ಪಾತ್ರರಾಗಿರುವರು. ಹನ್ನೊಂದನೇ ಪ್ರತಿಮೆಯನ್ನು ಧರಿಸುವ ಕ್ಷುಲ್ಲಕ ಐಲ್ಲಕರು ಮಧ್ಯಮ ಪಾತ್ರರು. ಉಳಿದ ವ್ರತಿಶ್ರಾವಕರಿಗೂ ಮಧ್ಯಮಪಾತ್ರವೆನ್ನುತ್ತಾರೆ. ಇವರಲ್ಲಿ ಮುನಿ, ಕ್ಷುಲ್ಲಕ, ಐಲ್ಲಕ ಇವರನ್ನು ಬಾಗಿಲಲ್ಲಿ ನಿಂತು ಆಹಾರಕ್ಕಾಗಿ ಕರೆಯಬೇಕಾಗುತ್ತದೆ. ಮತ್ತು ಅವರಿಗೆ ಒಂಭತ್ತು ಪ್ರಕಾರದ ಭಕ್ತಿಯಿಂದ ಆಹಾರದಾನವನ್ನು ಮಾಡಬೇಕಾಗುತ್ತದೆ.

ಪ್ರತಿಗ್ರಹವೇ ಮೊದಲನೇ ಭಕ್ತಿಯು. ‘ ಭೋ, ಮುನಿವರ್ಯ ತಿಷ್ಠ ತಿಷ್ಠ ’ ಹೀಗೆ ಬಾಯಿಂದ ನುಡಿದು, ಮೂರು ನಮಸ್ಕಾರಗಳನ್ನು ಹಾಕಿ, ಅವರನ್ನು ಮನೆಗೆ ಕರೆದೊಯ್ಯುವದು ಎರಡನೇ ತರದ

ಭಕ್ತಿಯು. ಅವರನ್ನು ಉಚ್ಚಾಸನದ ಮೇಲೆ ಕೂಡ್ರಿಸುವದೇ ಮೂರನೇ ತರದ ಭಕ್ತಿಯು. ಪಾದ ತೊಳೆಯುವದು ನಾಲ್ಕನೇ ತರದ ಭಕ್ತಿಯು, ಇದಕ್ಕೇ ಅರ್ಘ್ಯ ಕೊಡೋಣವೆನ್ನುತ್ತಾರೆ. ನಮಸ್ಕಾರವೇ ಐದನೇ ಭಕ್ತಿಯು. ಮನಸ್ಸನ್ನು ಶುದ್ಧವಾಗಿಡುವದೂ, ವಚನವನ್ನು ಶುದ್ಧವಾಗಿರಿಸುವದೂ ಏಳನೇ ತರದ ಭಕ್ತಿಯು. ಶರೀರವನ್ನು ಶುದ್ಧವಾಗಿಡುವದೇ ಎಂಟನೇ ತರದ ಭಕ್ತಿಯು. ಶುದ್ಧ ಆಹಾರವನ್ನು ಕೊಡುವದೇ ಒಂಭತ್ತನೇ ತರದ ಭಕ್ತಿಯು.

ದಾನ ಮಾಡುವವನಲ್ಲಿ ಅವಶ್ಯವಾಗಿ ಏಳು ಗುಣಗಳು ಇರಲೇಬೇಕು. ಇಹಲೋಕ, ಪರಲೋಕ, ಪಾಪ ಪುಣ್ಯ ಮುಂತಾದವುಗಳಲ್ಲಿ ಆಸ್ತಿಕ್ಯ ಬುದ್ಧಿ ಇರುವದು, ಅಥವಾ ಇಂಥ ಪಾತ್ರದಲ್ಲಿ ದಾನ ಮಾಡುವದರಿಂದ ಇಹಪರಲೋಕಗಳಲ್ಲಿ ಅವಶ್ಯವಾದ ಸುಖವಾಗುವ ಹಾಗೆ ಬುದ್ಧಿ ಇರುವದಕ್ಕೆ ಶ್ರದ್ಧೆ ಅನ್ನುತ್ತಾರೆ. ಇದೇ ಮೊದಲನೆಯ ಗುಣವು. ಆಲಸ್ಯ ಮಾಡದಿರುವದಕ್ಕೆ ಶಕ್ತಿ ಅನ್ನುತ್ತಾರೆ, ಇದು ಎರಡನೆಯ ಗುಣವು. ಪಾತ್ರದಲ್ಲಿ ಇದ್ದ ಗುಣಗಳಿಗೆ ಪೂಜ್ಯವೆಂದು ತಿಳಿಯುವದು ಮೂರನೇ ಗುಣವು, ಇದರ ಹೆಸರು ಭಕ್ತಿಯು. ದಾನಕೊಡುವ ಕ್ರಮವು ಗೊತ್ತಿರುವದೇ ವಿಜ್ಞಾನವು, ಇದೇ ನಾಲ್ಕನೇ ಗುಣವು. ದಾನಕೊಟ್ಟು, ಮಂತ್ರ ಔಷಧ ಮುಂತಾದ ಪ್ರತಿಫಲಗಳು ದೊರೆಯುವ ಇಚ್ಛೆಯನ್ನು ಮಾಡದಿರುವದು ನಿರ್ಲೋಭತೆ, ಇದೇ ಐದನೇ ಗುಣವು. ದಾನಕೊಡುವಾಗ

ಯಾರ ಮೇಲೂ ಸಿಟ್ಟಾಗಬಾರದು. ಕ್ಷಮಾಭಾವವನ್ನು ಇಡುವದು, ಇದರ ಹೆಸರು ಕ್ಷಮೆ. ಇದು ಆರನೆಯ ಗುಣವು. ಉತ್ತಮ ಕೆಲಸಗಳಲ್ಲಿ ಹಣವನ್ನು ವೆಚ್ಚಮಾಡುವದಕ್ಕೆ ತ್ಯಾಗವೆನ್ನುತ್ತಾರೆ. ಇದೇ ಏಳನೇ ಗುಣವು.



## ೨೮ನೆಯ ಪಾಠ.

## ಸ್ವಾಧ್ಯಾಯ.

ಒಂದು ದಿವಸ ಭೂಪಾಲಶೆಟ್ಟರು ತಮ್ಮ ಮಗನಾದ ಧರ್ಮಕುಮಾರನನ್ನು ಸಂಗಡ ಕರೆದುಕೊಂಡು ಜಿನಮಂದಿರದಲ್ಲಿ ಶಾಸ್ತ್ರವನ್ನು ಕೇಳಲಿಕ್ಕೆ ಹೋದರು. ಅಲ್ಲಿ ವಾಸುದೇವ ಶಾಸ್ತ್ರಿಯವರು ಶಾಸ್ತ್ರವನ್ನು ಓದುತ್ತ ಕುಳಿತಿದ್ದರು. ಇಬ್ಬರೂ ಶಾಸ್ತ್ರಿಗಳಿಗೆ ನಮಸ್ಕಾರ ಮಾಡಿ ಶಾಸ್ತ್ರವನ್ನು ಕೇಳಲಿಕ್ಕೆ ಕುಳಿತರು.

ಶಾಸ್ತ್ರಿಗಳು ಶಾಸ್ತ್ರವನ್ನು ಹೇಳುತ್ತಿರುವಾಗ ಸ್ವಾಧ್ಯಾಯದ ವಿಷಯವು ಹೊರಟಿತು. ಅದು ಹೇಗಂದರೆ:-ಸ್ವಾಧ್ಯಾಯವೆಂದರೆ ಶಾಸ್ತ್ರವನ್ನು ಓದುವದು ಮತ್ತು ಕೇಳುವದು. ಇದರಲ್ಲಿ ಐದು ಭೇದಗಳಿರುತ್ತವೆ. ಸ್ವತಃ ಧರ್ಮಶಾಸ್ತ್ರವನ್ನು ಓದುವದೇ ವಾಚನವು. ನಮಗೆ ಒಂದುವೇಳೆ ಶಾಸ್ತ್ರದೊಳಗಿನ ಯಾವದೊಂದು ವಿಷಯವು ತಿಳಿಯದಿದ್ದಲ್ಲಿ ಅದನ್ನು ಯಾವನೊಬ್ಬ ಜಾಣಪಂಡಿತನಿಂದ ತಿಳಿದುಕೊಳ್ಳುವದೇ ಪೃಚ್ಛನೆಯು. ತಿಳಿದುಕೊಂಡ ಸಂಗತಿಯ ಬಗ್ಗೆ ಮೇಲಿಂದ ಮೇಲೆ ಚಿಂತಿಸುವದೇ ಅನುಪ್ರೇಕ್ಷೆಯು.

ಶಾಸ್ತ್ರದೊಳಗಿನ ವಿಷಯಗಳನ್ನು ಲಕ್ಷದಲ್ಲಿಟ್ಟುಕೊಳ್ಳುವದಕ್ಕಾಗಿ, ಪಾಠ ಮಾಡುವದೇ ಆಮ್ನಾಯವು. ನಮಗೆ ಗೊತ್ತಿದ್ದ ಧರ್ಮವನ್ನು ಎರಡನೆಯವರಿಗೆ ಉಪದೇಶಿಸುವದೇ ಧರ್ಮೋಪದೇಶವು. ಈ ಪ್ರಕಾರ ಐದು ಬಗೆಗಳಿಂದ ಸ್ವಾಧ್ಯಾಯವನ್ನು ಮಾಡಬೇಕು. ಸ್ವಾಧ್ಯಾಯ ಮಾಡುವಾಗ ಶಾಸ್ತ್ರಗಳಿಗೆ ನಮಸ್ಕಾರವನ್ನು ಮಾಡಬೇಕು. ಅವುಗಳನ್ನು ಉಚ್ಚಾಸನದ ಮೇಲೆ ಅಂದರೆ ಚೌಕಿಯ ಮೇಲೆ ಇಲ್ಲವೆ ಮಣೆಗಳ ಮೇಲೆ ಇಡಬೇಕು. ಅವುಗಳಿಗೆ ಆವರಣಗಳನ್ನು ಚೆನ್ನಾಗಿ ಕಟ್ಟಬೇಕು. ಓಲೆಗಳು ಹರಿಯುದಂತೆ ಎಚ್ಚರದಿಂದ ಓದಬೇಕು.

ಶಾಸ್ತ್ರಿಗಳು ಈ ಪ್ರಕಾರ ವಿಷಯವನ್ನು ಹೇಳುತ್ತಿರುವಾಗ ಧರ್ಮಕುಮಾರನು ನಡುವೇ ಬಾಯಿ ಹಾಕಿ-ಶಾಸ್ತ್ರಿಗಳೇ, ನಾವು ವರ್ತಮಾನಪತ್ರಗಳನ್ನೂ ಬೇರೆ ಬೇರೆ ವಿಷಯಗಳುಳ್ಳ ಅನ್ಯ ಗ್ರಂಥಗಳನ್ನೂ ಓದುತ್ತೇವೆ. ಅದಕ್ಕೆ ಸ್ವಾಧ್ಯಾಯವೆನ್ನಬಹುದೋ? ಎಂದು ಪ್ರಶ್ನಮಾಡಿದನು.

ಶಾಸ್ತ್ರಿ.-ಅವುಗಳಿಗೆ ಸ್ವಾಧ್ಯಾಯವೆನ್ನಲಿಕ್ಕೆ ಬರುವದಿಲ್ಲ; ಯಾಕಂದರೆ, ವರ್ತಮಾನಪತ್ರಗಳನ್ನು ಇಲ್ಲವೆ ಮಿಕ್ಕ ಗ್ರಂಥಗಳನ್ನು ನಾವು ಬೇಕಾದರೀತಿಯಲ್ಲಿ ಅಂದರೆ, ಕುಳಿತಾಗಲೀ ಮಲಗಿಯಾಗಲೀ ಓದುತ್ತೇವೆ.ಅದರಲ್ಲಿ ವಿನಯವು ಉಳಿಯುವದಿಲ್ಲ. ಧರ್ಮಗ್ರಂಥಗಳ ಸ್ವಾಧ್ಯಾಯವನ್ನು ವಿನಯಪೂರ್ವಕವಾಗಿ ಮಾಡಬೇಕಾಗುತ್ತದೆ. ಧರ್ಮಗ್ರಂಥಗಳನ್ನು ನಮ್ಮ ಪರಮಪೂಜ್ಯರಾದ ಆಚಾರ್ಯರು ಬರೆದಿರುತ್ತಾರೆ. ಅವರಲ್ಲಿ ಎಲ್ಲವೂ ನಿಜವಾದ ಉಪದೇಶವೇ ಇತುತ್ತದೆ;

ಆದರೆ ವರ್ತಮಾನಪತ್ರಗಳಲ್ಲಾಗಲೀ, ಬೇರೆ ಗ್ರಂಥಗಳಲ್ಲಾಗಲೀ ಆ ಬಗೆಯ ಉಪದೇಶವಿರುವದಿಲ್ಲ. ಪರಸ್ಪರ ವಿರೋಧವು ಮಾತ್ರ ಕಂಡುಬರುತ್ತದೆ. ಕಾರಣ ಧರ್ಮಗ್ರಂಥಗಳನ್ನೇ ವಿನಯಪೂರ್ವಕವಾಗಿ ಓದುವದು, ಚಿಂತಿಸುವದು, ಇದೇ ಸ್ವಾಧ್ಯಾಯವು.

ಧರ್ಮಕುಮಾರ-ಬಹಳೇ ಚೆನ್ನಾಗಿ ಹೇಳಿದಿರಿ. ಈಹೊತ್ತಿನ ವರೆಗೂ ನನಗೆ ಈ ಸಂಗತಿಗಳು ಗೊತ್ತಾಗಿದ್ದಿಲ್ಲ. ಇನ್ನು ಮೇಲೆ ನಾನೂ ದಿನಾಲು ಸ್ವಾಧ್ಯಾಯ ಮಾಡುವೆನು.



## ೨೯ನೆಯ ಪಾಠ.

# ರತ್ನಗಳನ್ನು ಹಸನಮಾಡುವ ಗಾರದೇವನು.



ಕೌಶಾಂಬಿನಗರದಲ್ಲಿ ಗಂಧರ್ವಾನೀಕ ಎಂಬ ಹೆಸರಿನ ಒಬ್ಬ ಅರಸನಿದ್ದನು. ಆ ರಾಜನ ಮುತ್ತು, ಮಾಣಿಕ ಮತ್ತು ರತ್ನಗಳನ್ನು ಹಸನಮಾಡುವ ಗಾರದೇವ ಎಂಬ ಹೆಸರಿನ ಒಬ್ಬ ಮನುಷ್ಯನು ಅದೇ ಊರಲ್ಲಿ ಇರುತ್ತಿದ್ದನು. ಅವನು ಅರಮನೆಯೊಳಗಿನ ಒಂದು ಪದ್ಮರಾಗ ಮಣಿಯನ್ನು ಹಸನಮಾಡುವದಕ್ಕಾಗಿ ಮನೆಗೆ ತಂದನು; ಹಾಗೂ ಅದನ್ನು ಅಂಗಳದಲ್ಲಿಟ್ಟು ಹಸನಮಾಡುವ ವಿಚಾರದಲ್ಲಿದ್ದನು. ಅಷ್ಟರಲ್ಲಿ ಜ್ಞಾನಸಾಗರ ಎಂಬ ಹೆಸರಿನ ಮುನಿಗಳು ಅವರ ಮನೆಗೆ ಆಹಾರಕ್ಕಾಗಿ ಬಂದರು. ಮುನಿಮಹಾರಾಜರನ್ನು ನೋಡಿದ ಕೂಡಲೆ ಅವನು ತನ್ನ ಕೆಲಸವನ್ನು ಬಿಟ್ಟು, ಮುನಿಗಳಿಗೆ ಉಚ್ಚಾಸನವನ್ನು ಕೊಟ್ಟು, ಕಾಲುಗಳನ್ನು ತೊಳೆದನು. ಮುಂದೆ ನಮಸ್ಕಾರ ಮೊದಲಾದ ವಿಧಿಗಳನ್ನು ಮಾಡಿ, ಆಹಾರವನ್ನು ಕೊಡುವ ಸಿದ್ಧತೆಗೆ ಅಣಿಯಾದನು. ಅಷ್ಟರಲ್ಲಿ ಒಂದು ನವಿಲು, ಆ ಅಂಗಳದಲ್ಲಿ ಬಂತು; ಹಾಗೂ ಎಲ್ಲರ ಕಣ್ಣು ತಪ್ಪಿಸಿ, ಅದು ರತ್ನವನ್ನು ಎತ್ತಿಕೊಂಡು ಹಾರಿಹೋಯಿತು. ಇತ್ತ ಮುನಿಗಳು ಆಹಾರವನ್ನು ತಕ್ಕೊಂಡು ಅಡವಿಗೆ ಹೋದರು.

ಬಳಿಕ ಗಾರದೇವನಿಗೆ ರತ್ನದ ನೆನಪು ಆಯಿತು. ಕೂಡಲೆ ಅವನು ಅಂಗಳದಲ್ಲಿ ಬಂದು ನೋಡಲು, ಅಲ್ಲಿ ರತ್ನವು ಕಾಣಸಲಿಲ್ಲ. ಆಗ ಅವನು ಮನಸ್ಸಿನಲ್ಲಿ ಯೋಚಿಸಿದ್ದೇನಂದರೆ:- ಇಲ್ಲಿ ಮುನಿಮಹಾರಾಜರ ಹೊರತು ಬೇರೆ ಯಾರೂ ಬಂದಿರುವದಿಲ್ಲ. ನನ್ನ ರತ್ನವನ್ನು ಅವರೇ ಅಪಹರಿಸಿರಬೇಕು. ಆದ್ದರಿಂದ

ಅವರ ಕಡೆಗೇ ಹೋಗಿ, ವಿಚಾರಿಸಬೇಕೆಂದು ಹೊರಟನು. ಅವರನ್ನು ನೋಡಿದ ಕೂಡಲೆ, ಬಾಯಿಗೆ ಬಂದಂತೆ ಬೈಯಹತ್ತಿದನು. ಆಗ ಮುನಿಗಳು ತಮಗೆ ಉಪಸರ್ಗವಾಗುವದನ್ನು ಕಂಡು, ಏನೂ ಮಾತಾಡದೆ ಧ್ಯಾನಸ್ಥರಾದರು. ಅದರಿಂದ ಗಾರದೇವನು ಸಿಟ್ಟಾದನು; ಹಾಗೂ ಮುನಿಗಳನ್ನು ಕೋಲಿನಿಂದ ಒಳಿತಾಗಿ ಥಳಿಸಿದನು. ಆದರೂ ಮುನಿಗಳು ಮಾತಾಡಲಿಲ್ಲ. ಆಗ ನಿರುತ್ಸಾಹಗೊಂಡು, ಮರಳಿ ಹೊರಟನು. ತುಸು ದೂರ ಹೋದಮೇಲೆ ಅವನಿಗೆ ಮತ್ತೆ ರತ್ನದ ನೆನಪು ಆಯಿತು. ಆಗ ಗಕ್ಕನೆ ಮತ್ತೊಂದು ಕೋಲು ತಕ್ಕೊಂಡು, ಮುನಿಗಳ ಮೇಲೆ ಬೀಸಾಟಿದನು. ದೈವಯೋಗದಿಂದ ಆ ಕೋಲಿನ ಕಡತವು, ಮುನಿಗಳ ಹತ್ತರದಲ್ಲಿಯ ಗಿಡದ ಮೇಲೆ ಕುಳಿತಿರುವ ರತ್ನಾಪಹಾರಿಯಾದ ನವಲಿಗೆ ತಾಕಿತು. ಅದೇ ಕ್ಷಣದಲ್ಲಿ ನವಿಲು ಅಲ್ಲಿಂದ ಬೆದರಿ ಓಡಿಹೋಯಿತು. ಓಡುವಾಗ ರತ್ನವು ಅದರ ಬಾಯಿಯೊಳಗಿಂದ ನೆಲಕ್ಕೆ ಬಿತ್ತು.

ಈ ಪ್ರಕಾರ ಪದ್ಮರಾಗಮಣಿಯು ಬಿದ್ದದ್ದನ್ನು ನೋಡಿ, ಗಾರದೇವನಿಗೆ ಸೋಜಿಗವಾಯಿತು. ಹಾಗೂ ಅವಿಚಾರದಿಂದ ತಾನು ಮಾಡಿದ ಕೃತ್ಯದ ಬಗ್ಗೆ ಆತನಿಗೆ ಪಶ್ಚಾತ್ತಾಪವಾಗಹತ್ತಿತು. ಆನಂತರ ಅವನು ಮಣಿಯನ್ನು ತಕ್ಕೊಂಡು ಹೊರಟುಹೋದನು ಮತ್ತು ಹಸನಮಾಡಿ ರಾಜನಿಗೆ ಕೊಟ್ಟನು. ಬಳಿಕ ಖಿನ್ನಮನಸ್ಕನಾಗಿ ಸಂಸಾರವನ್ನು ಬಿಟ್ಟು, ಮುನಿಮಹಾರಾಜರ ಬಳಿಗೆ ಬಂದು, ಅವರನ್ನು ನಮಸ್ಕರಿಸಿ, ಅವರಿಂದ ದೀಕ್ಷೆಯನ್ನು ಪಡೆದನು.

ಸಾರಾಂಶವೇನೆಂದರೆ:-ಯಾವದೇ ಸಂಗತಿಯಾಗಲಿ, ವಿಚಾರದಿಂದಲೇ ಮಾಡಬೇಕು. ಅವಿಚಾರಕ್ಕೊಳಗಾಗಿ ಕೆಲಸ ಮಾಡಿದ್ದರಿಂದ ಓರ್ವ ಧರ್ಮಾತ್ಮರಾದ ಮುನಿಗಳಿಗೆ ಕಾರಣವಿಲ್ಲದೆ ಪೆಟ್ಟುಗಳು ತಗಲಿದವು. ಕಾರಣ ಅವಿಚಾರದಿಂದ ಕೆಲಸಗಳನ್ನು ಮಾಡಲೇ ಬಾರದು. ಇದೇ ಈ ಕಥೆಯ ಗುಟ್ಟಾಗಿರುವದು.



## ೩೦ನೆಯ ಪಾಠ.

# ತಂಬಾಕು, ಬಿಡಿ, ಸಿಗ್ರೇಟು.

ವಿರೂಪಾಕ್ಷ.—ಏನೋ ಗೋವಿಂದಾ, ನೀನು ಬಿಡಿ ಸೇದುವಿ. ಇದು ನಿನ್ನ ತಂದೆಯವರಿಗೂ ಗುರುಗಳಿಗೂ ತಿಳಿದರೆ, ಅವರು ಏನು ಅನ್ನುವರು?

ಗೋವಿ.—ಎಲೋ, ನಾನು ಅವರಿಗೆ ತಿಳಿಯದಂತೆ ಸೇದುತ್ತೇನೆ.

ವಿರೂ.-ಎಲೋ, ಈ ವ್ಯಸನವು ಬಹಳ ಕೆಟ್ಟದ್ದಾಗಿರುವದು. ಒಂದುವೇಳೆ ನಿನ್ನ ತಂದೆಯವರಿಗೆ ಈ ಮಾತು ಇಂದು ತಿಳಿಯದಿದ್ದರೂ ಕೂಡ, ಅದು ಯಾವಾಗಾದರೊಮ್ಮೆ ತಿಳಿಯತಕ್ಕದ್ದೇ. ಮೊನ್ನೆ ನಮ್ಮ ಗುರುಗಳು ಈ ವಿಷಯದಲ್ಲಿ ಎಲ್ಲ ಹುಡುಗರಿಗೆ ಉಪದೇಶ ಮಾಡಿರುವದನ್ನು ನೀನು ಕೇಳಲಿಲ್ಲ ಎಂಬಂತೆ ತೋರುತ್ತದೆ.

ಗೋ.-ಎಲೊ! ನಾನು ಆ ಉಪದೇಶವನ್ನು ಕೇಳಲಿಲ್ಲ, ಯಾಕಂದರೆ ನಾನು ಆ ದಿವಸ ಶಾಲೆಯೊಳಗೆ ಹಾಜರಿದ್ದಿಲ್ಲ. ಅವರು ಏನೇನು ಹೇಳಿದರು? ಹೇಳು ನೋಡೋಣ.

ವಿರೂ.— ತಂಬಾಕು ತಿನ್ನುವದು, ಬಿಡಿ ಸೇದುವದು, ಇವುಗಳಿಂದ ಶರೀರದ ಹಾನಿಯು ಬಹಳೇ ಆಗುತ್ತದೆಂದು ಹೇಳಿದರು. ತಂಬಾಕದಲ್ಲಿ ನಿಕೋಟಿನ ಎಂಬ ಹೆಸರಿನ ವಿಷವಿರುವದು. ಇದರಿಂದ ಹೃದಯಕ್ಕೆ ಸಂಬಂಧಿಸಿದ ರೋಗಗಳು ಉತ್ಪನ್ನವಾಗುತ್ತವೆ ಹಾಗೂ ಗೂರ, ಕೆಮ್ಮು ಈ ರೋಗಗಳೂ ಹುಟ್ಟುತ್ತವೆ. ಸ್ನಾಯುಗಳೊಳಗಿನ ಸಾಮರ್ಥ್ಯವು ಕಡಿಮೆಯಾಗುತ್ತದೆ. ಇದರಲ್ಲಿ ಅಮಲೇರುವ ಗುಣವಿರುವದರಿಂದ ಧರ್ಮಗ್ರಂಥಗಳಲ್ಲಿ ಇದನ್ನು ನಿಷೇಧಿಸಿದ್ದಾರೆ. ಇದರ ಚಟವು ಒಮ್ಮೆ ಹತ್ತಿತೆಂದರೆ, ಅದು ಬಿಡುವದಿಲ್ಲೆಂದು ಇದಕ್ಕೆ ವ್ಯಸನವೆಂದು ಅನ್ನುತ್ತಾರೆ. ಸಿಗಾರೇಟನ್ನು ಸೇದುವದಾದರೂ ಇದರಲ್ಲಿಯ ಒಂದು ಪ್ರಕಾರವೇ ಆಗಿರುವದು.

ಗೋವಿ.—ಎಲೋ ಸಿಗಾರೇಟನ್ನಂತೂ ಚನ್ನಾಗಿ ಶಿಕ್ಷಣ ಹೊಂದಿದ ಜನರಾದರೂ ಸೇದುವದನ್ನು ನಾವು ನೋಡುತ್ತೇವೆ. ಅಂದ ಬಳಿಕ ಅವರೂ ವ್ಯಸನವುಳ್ಳವರಾದರೋ?

ವಿರೂ.—ಎಲೋ ವ್ಯಸನವಿರುವದಂತೂ ಕೆಟ್ಟದ್ದೇ. ಕಲಿತ ಜನಗಳಲ್ಲಿ ಇಂಥ ವ್ಯಸನಗಳಿರುವವೆಂದೇ ದೇಶದ ಹಾನಿಯು ಆಗಹತ್ತಿದೆ. ಬಿಡಿ, ತಂಬಾಕುಗಳ ಸೆರಗಿನಿಂದ ನಮ್ಮ ಲಕ್ಷಾವಧಿ ರೂಪಾಯಿಗಳು ವ್ಯರ್ಥವಾಗಿ ವೆಚ್ಚವಾಗುತ್ತವೆ. ವ್ಯಸನದ ಯೋಗದಿಂದ ಮನುಷ್ಯನ ವಿಚಾರವೇ ಕೆಟ್ಟು ಹೋಗುವದು. ತಂಬಾಕದ ಎಲೆಗಳನ್ನು ದನಕರುಗಳು ಸಹ ತಿನ್ನುವದಿಲ್ಲ. ಅಂದ ಬಳಿಕ ಅದು ಎಷ್ಟು ಕೆಟ್ಟದ್ದಾಗಿರುವದು ನೀನೇ ನೋಡು, ಅಂಥ ಪದಾರ್ಥಗಳನ್ನು ನಾವು ಸೇವಿಸುವದು ಸರಿಯೇ?

ಗೋವಿ.—ಗೆಳೆಯಾ, ಬಹಳ ಚನ್ನಾಗಿ ಉಪದೇಶ ಮಾಡಿದಿ. ನಾನು ಇಂದಿನಿಂದ ಬಿಡಿ ಸೇದುವದನ್ನು ಬಿಟ್ಟೆನು. ನಿನ್ನಂಥ ಗೆಳೆಯನ ಸಹವಾಸದಿಂದ ನನಗೆ ಈ ಹೊತ್ತು ಬಹಳೇ ಲಾಭವಾಯಿತು. ಗೆಳೆಯಾ, ಹೀಗೆಯೇ ಮೇಲಿಂದ ಮೇಲೆ ಉಪದೇಶ ಮಾಡಿ, ನನ್ನ ತಪ್ಪುತಡೆಗಳನ್ನು ಬೈಲಿಗೆಳೆದು ನನ್ನನ್ನು ಎಚ್ಚರಗೊಳಿಸುತ್ತಿರು.



## ೩೧ನೆಯ ಪಾಠ.

## ಹೆಡ್ಡಾಟದ ಹಂಬಲ.

ಯಾವದೇ ವ್ಯಸನವಿರಲಿ, ಅದರ ಪರಿಣಾಮವು ಕೆಡಕೇ ಆಗತಕ್ಕದ್ದು. ಚಲೋ ಸಂಗತಿಗಳ ಹಂಬಲವಾದರೂ ಮರ್ಯಾದೆಯನ್ನು ಮೀರಿತೆಂದರೆ, ಅದರ ಪರಿಣಾಮವಾದರೂ ಕೆಡಕೇ ಆಗುತ್ತದೆ. ಅಂದಮೇಲೆ ಕೆಡಕು ಸಂಗತಿಗಳ ಪರಿಣಾಮವು ಕೆಟ್ಟಾದರೆ, ಅದರಲ್ಲಿ ಆಶ್ಚರ್ಯವೇನು?

ರಾಮನೂ ಗೋವಿಂದನೂ ಹೀಗೆ ಇಬ್ಬರು ಗೆಳೆಯರಿದ್ದರು. ಅವರಿಗೆ ಹೆಡ್ಡಾಟ ಆಡುವ ವ್ಯಸನವಿತ್ತು. ಮೊದಲು ಮೊದಲು ಅವರು ತಮಗೆ ತಾಯಿತಂದೆಗಳಿಂದ ತಿಂಡಿಗಾಗಿ ದೊರೆಯುವ ದುಡ್ಡುಗಳನ್ನು ಹಚ್ಚಿ ಗೋಲೀಗುಂಡುಗಳನ್ನಾಡುತ್ತಿದ್ದರು. ಹಣವು ಮೇಲಿಂದ ಮೇಲೆ ಸಿಗದ್ದರಿಂದ ಪುಸ್ತಕಗಳನ್ನೂ ಅಂಗಿಯ ಬಿರಡಿಗಳನ್ನೂ ಮಾರಿಯಾಗಲೀ, ಮನೆಯೊಳಗಿನ ಅಲ್ಪ ಸ್ವಲ್ಪ ಹಣವನ್ನು ಕಳವು ಮಾಡಿಯಾಗಲೀ ಆಡಹತ್ತಿದರು.

ಒಮ್ಮೆ ರಾಮನ ಬಳಿಯಲ್ಲಿ ಆಡಲಿಕ್ಕೆ ಹಣವಿದ್ದಿಲ್ಲ. ಗೋವಿಂದನ ಹತ್ತರ ಬರೇ ನಾಲ್ಕಾಣೆಗೆಳಿದ್ದವು. ಆಗ ರಾಮನು ಅವನ ಕಡೆಯಿಂದ ಎರಡು ಆಣೆಗಳನ್ನು ಕೈಗಡ ತಕ್ಕೊಂಡು ಆಡಹತ್ತಿದನು. ರಾಮನಿಗೆ ಮೇಲಿಂದಮೇಲೆ ಸೋಲು ಬರಹತ್ತಿದ್ದರಿಂದ ಅವನ ಹತ್ತರಿದ್ದ ಎರಡಾಣೆಗಳೂ ಹೋದವು. ಆಗ ಗೋವಿಂದನು ಕೈಗಡ ಕೊಟ್ಟ ಎರಡಾಣೆಗಳನ್ನು ತಿರುಗಿ ಬೇಡಹತ್ತಿದನು. ಆದರೆ, ರಾಮನಿಗೆ ಇನ್ನು ಮೇಲೆ ಹಣಬರಲಾರದೆಂದು ಮನವರಿಕೆಯಾದ್ದರಿಂದ ಅವನು ಏನೂ ಮಾತಾಡಲೊಲ್ಲನು. ಕೊನೆಗೆ ಇಬ್ಬರಲ್ಲಿ ಕಲಹವಾಗಿ, ಬಡೆದಾಟಕ್ಕೆ ಆರಂಭವಾಯಿತು. ಇಬ್ಬರಿಗೂ ಗಾಯಗಳಾದವು. ಅವರಿಬ್ಬರು ಪರಸ್ಪರರ ಬಟ್ಟೆಗಳನ್ನು ಎಳೆದು ಹರಿದುಬಿಟ್ಟರು. ಆ ಮೇಲೆ ರಾಮನು ಗೋವಿಂದನ ತಂದೆಯ ಬಳಿಯಲ್ಲಿ, ಗೋವಿಂದನು ರಾಮನ ತಂದೆಯ ಬಳಿಯಲ್ಲಿ ತಮ್ಮ ತಮ್ಮ ಜಗಳದ ಸುದ್ದಿನ್ನು ತಿಳಿಸಿದರು. ಆಗ ಇಬ್ಬರನ್ನೂ ಅವರವರ ಹಿರಿಯರು ಒಳಿತಾಗಿ ಹಣಿದರು. ಅಂದಿನಿಂದ ಅವರಿಬ್ಬರ ಗೆಳೆತನವು ಇಲ್ಲದಂತಾಗಿ ಅವರಿಬ್ಬರೂ ಒಬ್ಬರೊಬ್ಬರ ಹಗೆಗಳಾದರು. ತಾಯಿತಂದೆಗಳೂ, ಗುರುಹಿರಿಯರೂ ಆ ಹುಡುಗರನ್ನು ನಂಬದಾದರು. ಈ ಸುದ್ದಿಯು ಸಾಲೆಯ ಗುರುಗಳಿಗೆ ತಿಳಿಯಿತು. ಆಗ ಅವರಾದರೂ ಆ ಇಬ್ಬರನ್ನು ಹಳಿಯಹತ್ತಿದರು. ಒಟ್ಟಿನಲ್ಲಿ ಅವರಿಬ್ಬರೂ ಎಲ್ಲರಿಗೂ ಬೇಡಾದರು. ಆಗೆ ಅವರ ಕಣ್ಣುಗಳು ತೆರೆದವು. ಅವರು ಹೆಡ್ಡಾಟದ ಹಂಬಲವನ್ನು ಬಿಟ್ಟು ಬಿಟ್ಟರು.



## ೩೨ನೆಯ ಪಾಠ.

# ಗೊಮ್ಮಟಸ್ವಾಮಿಯ ಜಾತ್ರೆ.

ಸುಮತಿ-ಯಶೋದಾ ಅಕ್ಕಾ, ನೀವು ಇಂದು ಮುಂಜಾನೆ ಬಂಡಿಯಲ್ಲಿ ಕುಳಿತುಕೊಂಡು ಎಲ್ಲಿಂದ ಬಂದಿರಿ? ನಿಮ್ಮ ಸಂಗಡ ಈ ನಿಮ್ಮ ಪುಟ್ಟ ಕಸ್ತೂರಿಯೂ ಇದ್ದಳು.

ಯಶೋದೆ-ಹೀಗೇನು ಕೇಳುವಿರಿ? ನಾವು ಗೊಮ್ಮಟಸ್ವಾಮಿಗಳ ಅಭಿಷೇಕದ ಉತ್ಸವಕ್ಕೆ ಹೋಗಿದ್ದೆವು. ಅತ್ತಕಡೆಯಿಂದ ತಿರುಗಿ ಬಂದೆವು.

ಸುಮ.-ಗೊಮ್ಮಟಸ್ವಾಮಿಗಳ ಕ್ಷೇತ್ರವು ಎಲ್ಲಿ ಅದೆ? ನೀವು ಹೋಗುವಾಗ ಈ ಸಂಗತಿಯನ್ನು ನಮಗೇಕೆ ತಿಳಿಸಲಿಲ್ಲ?

ಯಶೋ.-ಶ್ರೀಗೊಮ್ಮಟಸ್ವಾಮಿಗಳ ಕ್ಷೇತ್ರವು ಮೈಸೂರ ಪ್ರಾಂತದಲ್ಲಿ ಮಂದಗಿರಿ ಎಂಬ ನಿಲುಮನೆ (ಸ್ಟೇಶನ) ಯಿಂದ ಹದಿನೈದು ಮೈಲು ಅಂತರದಲ್ಲಿರುವ ಶ್ರವಣಬೆಳಗುಳವೆಂಬ ಊರಲ್ಲಿ ಇರುವದು. ಅಲ್ಲಿ ಒಂದು ಗುಡ್ಡದ ಮೇಲೆ ೫೭ ಫೂಟು ಎತ್ತರವಾದ ಗೊಮ್ಮಟಸ್ವಾಮಿಗಳ ಭವ್ಯವಾದ ದಿಗಂಬರ ಮೂರ್ತಿಯು ಇದೆ. ಅದು ಬಹಳೇ ಸುಂದರವೂ ಅಚ್ಚುಕಟ್ಟಾಗಿಯೂ ಇರುತ್ತದೆ. ಅದನ್ನು ನೋಡುವವರಿಗೆ ಅಲ್ಲಿಂದ ಕದಲಲು ಮನಸಾಗುವದಿಲ್ಲ.

ಸುಮ.—ಈ ವರ್ಷದ ಜಾತ್ರೆಯು ಎಷ್ಟು ಕೂಡಿತ್ತು?

ಯಶೋ.—ಅದನ್ನೇನು ಕೇಳಬೇಡಿರಿ. ಎತ್ತ ನೋಡಿದತ್ತ ಜನರೇ ಕಾಣುತ್ತಿದ್ದರು. ಮಾರವಾಡ, ಪಂಜಾಬ, ಬಂಗಾಲ ಗುಜ

ರಾಥ, ಮಹಾರಾಷ್ಟ್ರ, ವರ್‍ಹಾಡ, ಕರ್ನಾಟಕ, ಮದ್ರಾಸ ಇವೇ ಮೊದಲಾದ ಪ್ರಾಂತಗಳಿಂದ ಜೈನ ಸ್ತ್ರೀಪುರುಷರೂ, ಮಕ್ಕಳು ಮರಿಗಳೂ ಬಂದಿದ್ದರು. ದರ್ಶನವನ್ನು ತೆಗೆದುಕೊಳ್ಳಲಿಕ್ಕೆ ಬಹಳೇ ಪ್ರಯಾಸವಾಗುತ್ತಿತ್ತು. ಈ ಅಭಿಷೇಕೋತ್ಸವವು ಹದಿನೈದು ವರ್ಷಗಳಿಗೆ ಒಮ್ಮೆ ಆಗುತ್ತಿರುವದರಿಂದ ಮೈಸೂರ ಸರಕಾರದವರೂ ದಾನವೀರ ಹುಕುಮುಚಂವ ಶೇಠರೂ ಈ ಉತ್ಸವಕ್ಕೆ ಬಂದಿದ್ದರು.

ಸುಮ.-ಜಾತ್ರೆಯು ಬಹಳೇ ಮೋಜಿನದಾಯಿತಷ್ಟೇ? ನಿಮ್ಮ ಸಂಗಡ ಕಸ್ತೂರಿಯೂ ಬಂದಿದ್ದಳು. ಅಲ್ಲಿ ಅವಳ ಉಪಯೋಗವೇನಾಯಿತು?

ಯಶೋ.—ಮುಂಬಯಿಯಿಂದ ಶ್ರೀಮತಿ ಮಗನಬಾಯಿಯವರೂ ಇಂದೂರಿನಿಂದ ಸೌಭಾಗ್ಯವತಿ ಕಂಚನಮ್ಮನವರೂ ಬಂದಿದ್ದರು. ಅವರ ಪ್ರಯತ್ನದಿಂದ ಅಲ್ಲಿ ಒಂದು ಸ್ತ್ರೀಯರ ಸಭೆಯಾಯಿತು. ಆ ಸಭೆಯಲ್ಲಿ ನಮ್ಮ ಕಸ್ತೂರಿಯು ಪದವನ್ನು ಪಾಡಿದಳು, ಮತ್ತು ಸಂವಾದವನ್ನು ಆಡಿ ತೋರಿಸಿದಳು. ಅವಳಿಗೆ ಒಂದು ಕುಪ್ಪಸವು ಇನಾಮಾಗಿ ದೊರೆಯಿತು.

ಸುಮ.-ಯಶೋದೆ ಅಕ್ಕಾ, ನಿಮಗೆ ಜಾತ್ರೆಗಳನ್ನು ನೋಡುವ ಹುರುಪು ಬಹಳೇ ಇದ್ದಂತೆ ತೋರುತ್ತದೆ. ನೀವು ಯಾವ ಜಾತ್ರೆಯನ್ನೂ ನೋಡದೆ ಬಿಡುವದಿಲ್ಲ.

ಯಶೋ.-ಸರಿ, ಸರಿ, ಜಾತ್ರೆಗೆ ಹೋಗುವದರಿಂದ ಬೇರೆ ಬೇರೆ ದೇಶಗಳೊಳಗಿನ ಜನರ ಪರಿಚಯವಾಗುತ್ತದೆ. ಈ ವರ್ಷದ

ಲ್ಲಂತೂ ಶ್ರೀಶಾಂತಿಸಾಗರ ಮುನಿಮಹಾರಾಜರು ತಮ್ಮ ಪರಿವಾರದೊಂದಿಗೆ ಅಲ್ಲಿಗೆ ಬಂದಿದ್ದರು. ಅವರ ದರ್ಶನದ ಅಲಭ್ಯ ಲಾಭವಾಯಿತು. ಅವರ ಕೇಶಲೋಚ ನೋಡಲಿಕ್ಕೆ ಸಿಕ್ಕಿತು. ಇದರಂತೆ ಧಾರ್ಮಿಕ ಲಾಭವಾದರೂ ಆಗುತ್ತದೆ.

ಸುಮ.–ನೀವು ಧನ್ಯರಿರುವಿರಿ! ನಿಮಗೆ ಜಾತ್ರೆಗಳನ್ನು ನೋಡಲು, ಮೇಲಿಂದ ಮೇಲೆ ಅವಕಾಶವು ದೊರೆಯುತ್ತದೆ. ಇದು ನಿಮ್ಮ ಸದ್ಭಾಗ್ಯವೇ ಸರಿ. ಇನ್ನು ಮುಂದೆ ಯಾವದಾದರೊಂದು ಜಾತ್ರೆಗೆ ಹೋಗುವಾಗ ನನಗೆ ತಿಳಿಸಿರಿ. ಅಂದರೆ, ನಾನೂ ಅನುವು ನೋಡಿಕೊಂಡು ಬರುವೆನು. ಒಳ್ಳೇದು, ನಮಸ್ಕಾರ, ಬರುತ್ತೇನೆ.



## ೩೩ನೆಯ ಪಾಠ.

# ದಾನವೀರ ಶೇಠ ಮಾಣಿಕಚಂದರು.



ಮಾಣಿಕಚಂದ ಶೇಠರ ಜನ್ಮವು ಸುರತದಲ್ಲಿ ವಿಕ್ರಮ ಸಂವತ್ ೧೯೦೮ನೇ ಕಾರ್ತಿಕ ವದ್ಯ ೧೩ಯ ದಿವಸ ಆಗಿತ್ತು. ಅವರ ತಂದೆಯ ಹೆಸರು ಹಿರಾಚಂದ ಮತ್ತು ತಾಯಿಯ ಹೆಸರು ವಿಜಲೀ ಬಾಯಿ. ಇವರಿಗೆ ಮೋತೀಚಂದ, ಪಾನಾಚಂದ, ನವಲಚಂದ ಎಂಬ ಮೂವರು ತಮ್ಮಂದಿರಿದ್ದರು. ಎಲ್ಲ ತಮ್ಮಂದಿರಗೂಡ ಇವರಿಗೂ ಗುಜರಾಥಿ ಭಾಷೆಯ ಶಿಕ್ಷಣವು ಸಾಧಾರಣವಾಗಿ ಓದು ಬರೆಯಲಿಕ್ಕೆ ಬರುವಷ್ಟು ಆಗಿತ್ತು. ಸುರತದಲ್ಲಿ ವ್ಯಾಪಾರವು ಚನ್ನಾಗಿ ನಡೆಯದ ಮೂಲಕ ಶೇಠ ಹಿರಾಚಂದ ಗುಮಾನಜಿಯವರು ಮುಂಬಯಿಗೆ ಬಂದರು. ಮೊದಮೊದಲು ಈ ಎಲ್ಲ ಬಂಧುಗಳು ಮುತ್ತುಗಳನ್ನು ಪೋಣಿಸುವ ಹೋರೆಯನ್ನು ಮಾಡಹತ್ತಿದರು.

ಇವರ ತಂದೆಯು ಇವರಿಗೆ ಅಡಿಗೆ ಮಾಡಿ ಊಟಕ್ಕೆ ಹಾಕುತ್ತಿದ್ದನಂತೆ ! ಇವರು ಮೊದಲು ತೀರ ದರಿದ್ರಾವಸ್ಥೆಯಲ್ಲಿದ್ದರು. ಮುತ್ತುಗಳನ್ನು ಪೋಣಿಸುವ ಹೋರೆಯನ್ನು ನಂಬಿಗೆಯಿಂದ ಮಾಡಿದ್ದರಿಂದ ಅದರಲ್ಲಿ ಅವರಿಗೆ ಮಿತಿಮೀರಿ ಹಣವು ದೊರೆಯಿತು. ಸಂವತ್ ೧೯೨೭ರಲ್ಲಿ ಮಾಣಿಕಚಂದ ಹಾಗೂ ಪಾನಾಚಂದರು ಜವ್ಹೇರೀ ಎಂಬ ಹೆಸರಿನದೊಂದು ಅಂಗಡಿಯನ್ನು ಆರಂಭ ಮಾಡಿದರು. ಅವರ ಮುತ್ತಿನ ವ್ಯಾಪಾರವು ಯುರೋಪಖಂಡದವರೆಗೂ ನಡೆಯುತ್ತಿದ್ದದರಿಂದ ಅವರಿಗೆ ಒಳಿತಾಗಿ ಸಂಪತ್ತು ದೊರೆಯಿತು.

ಮಾಣಕಚಂದರು ೮ ವರ್ಷದ ವಯಸ್ಸಿನವರಿರುವಾಗಲೇ ಯಾವಾಗಲೂ ತಮ್ಮ ತಂದೆಯ ಕೂಡ ಶ್ರೀಜಿನೇಶ್ವರನ ದರ್ಶನ ಹಾಗೂ ಪೂಜೆಯನ್ನು ಮಾಡುವ ಅಭ್ಯಾಸವನ್ನು ಇಟ್ಟದ್ದರು. ಅವರು ಹದಿನೈದು ವರುಷದವರಾದಾಗ ದಿನಾಲು ನಿಯಮದಿಂದ ಜೈನಗ್ರಂಥದ ಸ್ವಾಧ್ಯಾಯವನ್ನು ಮಾಡಹತ್ತಿದರು. ಇವರಿಗೆ ಶಾಸ್ತ್ರ ಕೇಳುವದು ಧರ್ಮಸಂಬಂಧವಾದ ವಿವಾದಗಳನ್ನು ನಡೆಯಿಸುವದು ಬಹಳೇ ಸೇರುತ್ತಿತ್ತು. ಇವರು ಪರೋಪಕಾರಿಗಳಾಗಿದ್ದರು.

ಪಂಡಿತ ಗೋಪಾಲದಾಸ ಬರಯ್ಯಾ ಹಾಗೂ ಶ್ರೀಯುತ ಶೇಠ ಹಿರಾಚಂದ ನೇಮಚಂದ ದೋಶಿ ಇವರ ಸಹವಾಸವು ಶೇಠ ಮಾಣಿಕಚಂದರಿಗೆ ಘಟಿಸಿದ್ದರಿಂದಲೇ ಅವರ ಕೈಯಿಂದ ಎಷ್ಟೋ ಧಾರ್ಮಿಕ ಕೆಲಸಗಳಾಗಿರುತ್ತವೆ. ಮುಂಬಯಿ ಪಟ್ಟಣದಲ್ಲಿ ಜೈನ ವಿದ್ಯಾರ್ಥಿಗಳಿಗೆ ಉಚ್ಚ ಪ್ರತಿಯ ಶಿಕ್ಷಣವನ್ನು

ಕೊಡುವದಕ್ಕಾಗಿ, ತಮ್ಮ ತಂದೆಯ ಹೆಸರಿನಿಂದ ಒಂದು ಬೋರ್ಡಿಂಗವನ್ನು ತೆಗೆದಿರುವರು. ಬೋರ್ಡಿಂಗವನ್ನು ಸ್ಥಾಪಿಸುವ ಇವರ ಮೂಲ ಉದ್ದೇಶವು ಆಂಗ್ಲಶಿಕ್ಷಣದ ಸಂಗಡ ಧಾರ್ಮಿ ಶಿಕ್ಷಣದ ಪ್ರಸಾರವಾಗಬೇಕೆಂದೇ ಇತ್ತು. ಎಲ್ಲ ವಿದ್ಯಾರ್ಥಿಗಳು ದಿನಾಲು ದೇವದರ್ಶನವನ್ನು ಅವಶ್ಯವಾಗಿ ತೆಗೆದುಕೊಳ್ಳಬೇಕೆಂದು ನಿಯಮ ಮಾಡಿ, ಆ ಬೋರ್ಡಿಂಗದಲ್ಲಿ ಒಂದು ಮಂದಿರವನ್ನು ಕಟ್ಟಿಸಿಕೊಟ್ಟದ್ದಾರೆ. ಇದರ ಹೊರತಾಗಿ, ಕೊಲ್ಹಾಪುರದಲ್ಲಿ ಬೋರ್ಡಿಂಗದ ಸಲುವಾಗಿ ದೊಡ್ಡ ಕಟ್ಟಡವನ್ನು ಕಟ್ಟಿಸಿಕೊಟ್ಟಿ ರುವರು. ರತಲಾಮವೆಂಬಲ್ಲಿ ತಮ್ಮ ತಂದೆಯ ಹೆಸರಿನಿಂದ ಒಂದು ಬೋರ್ಡಿಂಗವನ್ನು ನಡಿಸಿರುವರು. ಸ್ತ್ರೀಯರ ಶಿಕ್ಷಣಕ್ಕಾಗಿ, ಮುಂಬಯಿಯ ಶ್ರಾವಿಕಾಶ್ರಮಕ್ಕೆ ಇಮಾರತಿಯ ಅನುಕೂಲತೆ ಯನ್ನು ಮಾಡಿಕೊಟ್ಟಿರುವರು. ಇದರ ಹೊರತಾಗಿ ಇನ್ನೂ ಎಷ್ಟೋ ಪರಹಿತದ ಕೆಲಸಗಳನ್ನು ಮಾಡಿರುವರು.

ಎಲ್ಲ ದಿಗಂಬರ ಜೈನ ತೀರ್ಥಕ್ಷೇತ್ರಗಳ ವ್ಯವಸ್ಥೆಯು ಉತ್ತಮ ರೀತಿಯಿಂದ ನಡೆಯಬೇಕೆಂದು, ತೀರ್ಥಕ್ಷೇತ್ರಕಮಿಟಿ ಯನ್ನು ಇವರೇ ಸ್ಥಾಪಿಸಿರುವರು. ದಿಗಂಬರ ಜೈನಸಮಾಜದಲ್ಲಿ ಇವರು ಮುಖ್ಯವಾಗಿ ಎಣಿಸಲ್ಪಡುತ್ತಿದ್ದರು. ಇವರು ಸಂವತ್ ೧೯೭೦ನೆ ಆಷಾಢ ವದ್ಯ ೯ಯ ದಿನ ಮೃತರಾದರು. ಯಾವ ಮಹಾತ್ಮರಾಗಲೀ, ಗತಿಸಿದರೂ "ಅಳಿವದು ಕಾಯವು ಉಳಿವದು ಕೀರ್ತಿಯು ಇಳೆಯೊಳು" ಎಂಬಂತೆ ಅವರ ಕೀರ್ತಿಯು ಮಾತ್ರ ಹಿಂದೆ ಉಳಿಯುತ್ತದೆ.



# ೩೪ನೆಯ ಪಾಠ.

## ಜೀವ.

ಶಿಷ್ಯ.—ಗುರುಗಳೇ, ಜೀವ ಅಂದರೇನು? ಅದರ ಸ್ವರೂಪವನ್ನು ತಿಳಿಸಿಕೊಟ್ಟರೆ ನೆಟ್ಟಗಾಗುವದು.

ಗುರು.—ಯಾವದರಲ್ಲಿ ಚೈತನ್ಯವಿರುವದೋ ಅದೇ ಜೀವವು. ನೋಡುವ ಹಾಗೂ ತಿಳಿದುಕೊಳ್ಳುವ ಶಕ್ತಿಗೆ ಚೇತನೆ ಅನ್ನುತ್ತಾರೆ. ಜೀವವು ನಿರಾಕಾರವಾಗಿರುತ್ತದೆ. ಸ್ಪರ್ಶ, ರಸ, ಗಂಧ, ವರ್ಣ ಎಂಬ ಶರೀರದ ಗುಣಗಳು ಅದರಲ್ಲಿರುವದಿಲ್ಲ.

ಶಿಷ್ಯ.—ಜೀವದಲ್ಲಿ ಭೇದಗಳೆಷ್ಟು?

ಗುರು.—ಜೀವದಲ್ಲಿ ಸಂಸಾರೀಜೀವ, ಮುಕ್ತಜೀವ ಹೀಗೆ ಎರಡು ಮುಖ್ಯ ಭೇದಗಳಿರುತ್ತವೆ. ನಾಲ್ಕು ಪ್ರಕಾರದ ಗತಿಯಲ್ಲಿ ಶರೀರವನ್ನು ಧಾರಣಮಾಡಿ, ತಿರುಗುವ ಜೀವಗಳಿಗೆ ಸಂಸಾರೀ ಜೀವಗಳೆನ್ನುತ್ತಾರೆ. ಸತ್ತಮೇಲೆ ಸಂಸಾರದಲ್ಲಿ ಎಂದೂ ಬಾರದಂಥ ಅಂದರೆ ಶರೀರವನ್ನು ಧಾರಣಮಾಡದಂಥ ಎಲ್ಲ ಕರ್ಮಗಳಿಂದ ಮುಕ್ತವಾಗಿರುವ ಜೀವಕ್ಕೆ ಮುಕ್ತಜೀವವೆನ್ನುತ್ತಾರೆ.

ಶಿಷ್ಯ.—ಮುಕ್ತಜೀವಗಳಲ್ಲಿ ಏನಾದರೂ ಭೇದಗಳುಂಟೋ?

ಗುರು.—ಅವುಗಳಲ್ಲಿ ಯಾವ ಭೇದವೂ ಇರುವದಿಲ್ಲ. ಎಲ್ಲವೂ ಒಂದೇ ವಿಧವಾಗಿರುತ್ತವೆ.

ಶಿಷ್ಯ.—ಸಂಸಾರೀ ಜೀವಗಳಲ್ಲಿ ಎಷ್ಟು ಭೇದಗಳಿರುವವು?

ಗುರು.—ತ್ರಸ ಮತ್ತು ಸ್ಥಾವರ ಹೀಗೆ ಎರಡು ಭೇದಗಳಿರುವವು. ನಾಮಕರ್ಮದ ಉದಯದಿಂದ ಎರಡು ಇಂದ್ರಿಯಗಳನ್ನು ಮೊದಲುಗೊಂಡು ಐದು ಇಂದ್ರಿಯಗಳವರೆಗೆ ಶರೀರವನ್ನು ಧಾರಣ ಮಾಡುವ ಜೀವಗಳಿಗೆ ತ್ರಸ ಜೀವಗಳೆನ್ನುತ್ತಾರೆ. ಈ ಜೀವಗಳು ಅತ್ತಿತ್ತ ಅಡ್ಡಾಡುತ್ತವೆ. ಗುಂಡಾಳಿ, ತಗಣಿ, ಇರಿವೆ, ಕಟ್ಟರಿವೆ, ಗುಂಗೀಹುಳ, ಕುದುರೆ, ಎತ್ತು, ಮನುಷ್ಯ, ದೇವತೆ, ನಾರಕಿ ಮುಂತಾದ ಜೀವಗಳು ಈ ಬಗೆಯ ಜೀವಗಳು. ಹುಟ್ಟುವ, ಬೆಳೆಯುವ ಮತ್ತು ಸಾಯುವ ಜೀವಗಳಿಗೆ ಸ್ಥಾವರ ಜೀವಗಳೆನ್ನುತ್ತಾರೆ. ಆದರೆ ಇವು ಮಾತ್ರ ತಿರುಗಾಡುವದಿಲ್ಲ. ನಾಮಕರ್ಮದ ಉದಯದಿಂದ ಏಕೇಂದ್ರಿಯಗಳಾಗಿ ಉಂಟಾದ ಜೀವಕ್ಕೆ ಸ್ಥಾವರ ಜೀವವೆನ್ನುತ್ತಾರೆ. ನೆಲ, ನೀರು, ಬೆಂಕಿ, ಗಾಳಿ, ಗಿಡ ಇವು ಸ್ಥಾವರ ಜೀವಗಳು.



## ೩೫ನೆಯ ಪಾಠ.

## ಇಂದ್ರಿಯಗಳು.

ಗುರು—ಬಾಲಕರೇ, ಈ ಹೊತ್ತು ನಿಮಗೆ ಇಂದ್ರಿಯಗಳ ವಿಷಯವನ್ನು ಹೇಳಬೇಕೆನ್ನುತ್ತೇನೆ. ಯಾವವುಗಳ ಮುಖಾಂತರವಾಗಿ ಜೀವವು ಗುರುತಿಸಲ್ಪಡುತ್ತದೋ ಅವುಗಳಿಗೆ ಇಂದ್ರಿಯಗಳೆನ್ನುತ್ತಾರೆ. ಬಹಳಮಾಡಿ ಸಂಸಾರಿಜೀವಗಳಿಗೆ ಇಂದ್ರಿಯಗಳ ದ್ವಾರದಿಂದಲೇ ಜ್ಞಾನವಾಗುತ್ತದೆ. ಇಂದ್ರಿಯಗಳು ೫ ಇರುವವು.

ಯಾವವೆಂದರೆ-(೧) ಸ್ಪರ್ಶನೇಂದ್ರಿಯ ಅಂದರೆ ತೊಗಲು, (೨) ರಸನೇಂದ್ರಿಯ ಅಂದರೆ ನಾಲಿಗೆ ಅಥವಾ ಪದಾರ್ಥಗಳನ್ನು ತಿನ್ನುವದಕ್ಕಾಗಿ ಸಿದ್ಧವಾದ ಯಂತ್ರ, (೩) ಘ್ರಾಣೇಂದ್ರಿಯ ಅಂದರೆ ಮೂಗು, (೪) ಚಕ್ಷುರಿಂದ್ರಿಯವೆಂದರೆ ಕಣ್ಣು, (೫) ಕರ್ಣೇಂದ್ರಿಯ ಅಂದರೆ ಕಿವಿ.

ವಿದ್ಯಾರ್ಥಿ.-ಗುರುಗಳೇ! ಇಂದ್ರಿಯಗಳ ಹೆಸರುಗಳು ಮಾತ್ರ ತಿಳಿದವು. ಆದರೆ, ಅವುಗಳಲ್ಲಿಯ ಪ್ರತಿಯೊಂದು ಇಂದ್ರಿಯದಿಂದ ಜೀವಕ್ಕಾಗುವ ಸಹಾಯವು ಯಾವದು? ಅದನ್ನಷ್ಟು ದಯಮಾಡಿ ಹೇಳಿರಿ.

ಗುರು—(೧) ಜೀವಕ್ಕೆ ಹಗುರು, ಜಡ, ಒಣ, ಜಿಗಟು, ಬಿರುಸು, ಮೆತ್ತಗೆ, ತಂಪು, ಕಾವು, ಇವುಗಳ ಜ್ಞಾನವು ಯಾವ ಇಂದ್ರಿಯದಿಂದಾಗುತ್ತದೋ ಅದಕ್ಕೆ ಸ್ಪರ್ಶನೇಂದ್ರಿಯವೆನ್ನುತ್ತಾರೆ. ಅಗ್ನಿಯ ಸ್ಪರ್ಶವಾಯಿತೆಂದರೆ ಉಷ್ಣತೆಯೂ, ನೀರಿನ ಸ್ಪರ್ಶವಾಯಿತೆಂದರೆ ತಂಪೂ ತಿಳಿಯುತ್ತವೆ. (೨) ಶೀ, ಕಹಿ, ಕಾರ, ಹುಳಿ ಮೊದಲಾದ ರಸಗಳ ಜ್ಞಾನವು ಯಾವ ಇಂದ್ರಿಯದಿಂದಾಗುತ್ತದೋ ಅದಕ್ಕೆ ರಸನೇಂದ್ರಿಯವೆನ್ನುತ್ತಾರೆ. ಬೆಲ್ಲವು ಶೀ, ಬೇವಿನ ಎಲೆಯು ಕಹಿ, ಮೆಣಸಿನಕಾಯಿ ಕಾರ, ಹುಣಸೇಹಣ್ಣು ಹುಳಿ. (೩) ಸುಗಂಧ ಹಾಗೂ ದುರ್ಗಂಧಗಳ ಜ್ಞಾನವು ಯಾವ ಇಂದ್ರಿಯದಿಂದಾಗುತ್ತದೋ ಆ ಇಂದ್ರಿಯಕ್ಕೆ ಘ್ರಾಣೇಂದ್ರಿಯವೆಂದೆನ್ನುತ್ತಾರೆ. ಗುಲಾಬೀಹೂವು, ಕೇದಗೆ ಇವುಗಳ ವಾಸನೆಯು ಸುಗಂಧ

ಯುಕ್ತವಾಗಿರುತ್ತದೆ. ಮತ್ತು ಚಿಮಣೀ ಎಣ್ಣೆ, ಡಾಂಬರ ಮೊದಲಾದ ಪದಾರ್ಥಗಳ ವಾಸನೆಯು ದುರ್ಗಂಧಯುಕ್ತವಾಗಿರುತ್ತದೆ. (೪) ಕಪ್ಪು, ಹಳದಿ, ಕೆಂಪು, ನೀಲಿ, ಬಿಳೇ ಮೊದಲಾದ ಬಣ್ಣಗಳ ಅಥವಾ ಈ ಬಣ್ಣಗಳು ಒಂದರೊಳಗೊಂದು ಕೂಡಿ ಆಗುವ ಅನೇಕ ಪ್ರಕಾರದ ಬಣ್ಣಗಳ ಜ್ಞಾನವು ಯಾವ ಇಂದ್ರಿಯದಿಂದಾಗುವದೋ ಅದಕ್ಕೆ ಚಕ್ಷುರಿಂದ್ರಿಯವೆಂದೆನ್ನುತ್ತಾರೆ. ಉದಾ:— ಹಾಲು, ಮೊಸರು, ಬೆಳ್ಳಿ ಇವು ಬೆಳ್ಳಗೆ. ಇದ್ದಲಿ ಕರ‍್ರಗೆ, ರಕ್ತವು ಕೆಂಪಗೆ, ಬಂಗಾರವು ಹಳದಿ. (೫) ಶಬ್ದದ ಜ್ಞಾನವು ಯಾವ ಇಂದ್ರಿಯದಿಂದ ಆಗುತ್ತದೋ ಆ ಇಂದ್ರಿಯಕ್ಕೆ ಕರ್ಣೇಂದ್ರಿಯವೆಂದೆನ್ನುತ್ತಾರೆ. ಉದಾ:—ಮನುಷ್ಯರ ಮತ್ತು ಪಶುಗಳ ಕೂಗು, ಝಾಂಗಟ, ಕೊಳಲು ಮುಂತಾದವುಗಳ ಸಪ್ಪಳಗಳು.

ವಿದ್ಯಾ.—ಗುರುಗಳೇ ಇಂದಿನ ಪಾಠದಿಂದ ನಮಗೆ ಬಗೆಬಗೆಯ ವಿಷಯಗಳು ತಿಳಿದವು. ನಾಳೆ ಇವುಗಳನ್ನು ಪಾಠಮಾಡಿಕೊಂಡು ಬರುತ್ತೇವೆ. ಆಮೇಲೆ ತಾವು ನಮಗೆ ಪ್ರಶ್ನೆಗಳನ್ನು ಮಾಡಿ, ನಮ್ಮ ಜ್ಞಾನವನ್ನು ಪರೀಕ್ಷಿಸಿರಿ.



## ೩೬ನೆಯ ಪಾಠ

# ಐದುಪ್ರಕಾರದ ಜೀವಗಳು.

ಪ್ರಶ್ನ.—ಬರೇ ಸ್ಪರ್ಶನ ಇಂದ್ರಿಯುವುಳ್ಳ ಜೀವಕ್ಕೆ ಎಂಥ ಜೀವವೆನ್ನುತ್ತಾರೆ?

ಉತ್ತರ.—ಅದಕ್ಕೆ ಏಕೇಂದ್ರಿಯ ಜೀವವೆನ್ನುತ್ತಾರೆ.

ಪ್ರಶ್ನ.—ಏಕೇಂದ್ರಿಯ ಜೀವಗಳಾವವು?

ಉತ್ತರ.—ಪೃಥ್ವಿ, ನೀರು, ಬೆಂಕಿ, ಗಾಳಿ, ವನಸ್ಪತಿ.

ಪ್ರಶ್ನ.–ಈ ಏಕೇಂದ್ರಿಯ ಜೀವಗಳಿಗೆ ಬೇರೆ ಹೆಸರೇನಿರುವದು?

ಉತ್ತರ.—ಅವುಗಳಿಗೆ ಸ್ಥಾವರ ಜೀವವೆಂತಲೂ ಅನ್ನುತ್ತಾರೆ.

ಪ್ರಶ್ನ—ಸ್ಪರ್ಶನ ಹಾಗೂ ರಸನ ಹೀಗೆ ಎರಡು ಇಂದ್ರಿಯಗಳುಳ್ಳ ಜೀವಕ್ಕೆ ಏನನ್ನುತ್ತಾರೆ?

ಉತ್ತರ.—ಇವಕ್ಕೆ ದ್ವೀಂದ್ರಿಯ ಜೀವವೆನ್ನಬೇಕು.

ಪ್ರಶ್ನ.—ದ್ವೀಂದ್ರಿಯ ಜೀವಗಳಾವವು?

ಉತ್ತರ.—ಗುಂಟಾಳಿ, ಶಂಖದಹುಳ, ಸೀರು, ಹೇನು ಮೊದವುಗಳು.

ಪ್ರಶ್ನ.—ಸ್ಪರ್ಶನ, ರಸನ, ಘ್ರಾಣ ಈಮೂರು ಇಂದ್ರಿಯಗಳುಳ್ಳ ಜೀವಕ್ಕೆ ಏನೆನ್ನುತ್ತಾರೆ.

ಉತ್ತರ.—ಇವಕ್ಕೆ ತ್ರೀಂದ್ರಿಯ ಜೀವವೆನ್ನುತ್ತಾರೆ.

ಪ್ರಶ್ನ.—ತ್ರೀಂದ್ರಿಯ ಜೀವಗಳಾವವು?

ಉತ್ತರ.—ತಗಣಿ, ಇರಿವೆ, ಕಟ್ಟರಿವೆ ಮೊದಲಾದವುಗಳು.

ಪ್ರಶ್ನೆ.—ಸ್ಪರ್ಶನ, ರಸನೆ, ಘ್ರಾಣ, ಚಕ್ಷು ಈ ನಾಲ್ಕು ಇಂದ್ರಿಯಗಳುಳ್ಳ ಜೀವಕ್ಕೆ ಏನನ್ನುತ್ತಾರೆ?

ಉತ್ತರ.—ಇವಕ್ಕೆ ಚತುರಿಂದ್ರಿಯ ಜೀವಗಳೆನ್ನಬೇಕು.

ಪ್ರಶ್ನ.—ಚತುರಿಂದ್ರಿಯ ಜೀವಗಳಾವವು?

ಉತ್ತರ.—ಗುಂಗೀಹುಳ, ನೊಣ, ದೀಪದಹುಳ ಮುಂತಾದವುಗಳು.

ಪ್ರಶ್ನ.—ಸ್ಪರ್ಶನ, ರಸನ, ಘ್ರಾಣ, ಚಕ್ಷು, ಕರ್ಣ ಈ ಐದು ಇಂದ್ರಿಯಗಳುಳ್ಳ ಜೀವಕ್ಕೆ ಏನನ್ನುತ್ತಾರೆ?

ಉತ್ತರ.—ಇವಕ್ಕೆ ಪಂಚೇಂದ್ರಿಯ ಜೀವವೆನ್ನುತ್ತಾರೆ.

ಪ್ರಶ್ನ.—ಪಂಚೇಂದ್ರಿಯ ಜೀವಗಳಾವವು?

ಉತ್ತರ.—ದೇವ, ನಾರಕಿ, ಮನುಷ್ಯ, ಪಶು ಅಂದರೆ, ಆಕಳು, ಎತ್ತು, ಎಮ್ಮೆ, ಕುದುರೆ, ಮಂಗ, ನಾಯಿ, ಟಗರು, ಆಡು, ಸಿಂಹ, ಹುಲಿ ಮುಂತಾದವುಗಳು. ಪಕ್ಷಿ ಅಂದರೆ ಕಾಗೆ, ಗಿಳಿ, ನವಿಲು, ಗುಬ್ಬೆ ಮುಂತಾದವುಗಳು.



## ೩೭ನೆಯ ಪಾಠ.

# ತ್ರಸ ಜೀವಗಳ ತರಗಳು.

ರಾಮರಾಯರು ತಮ್ಮ ಮಗನಾದ ವಾಮನನನ್ನು ಸಂಗಡ ಕರೆದುಕೊಂಡು ತೋಟಕ್ಕೆ ಹೋದರು. ತೋಟವು ಬಹಳೇ ರಮ್ಯವಾಗಿದ್ದು, ಅಲ್ಲಿ ಬಗೆಬಗೆಯ ಪಶುಪಕ್ಷಿಗಳಿದ್ದವು.

ವಾಮನ.—ಆನೆ, ಚಿಗರಿ, ಹುಲಿ, ನರಿ, ಮಂಗ, ಬೆಕ್ಕು ಮುಂತಾದ ಪಶುಗಳಿಗೆ ಎಷ್ಟು ಇಂದ್ರಿಯಗಳಿರುತ್ತವೆ?

ರಾಮ.—ಇಗೋ ನೋಡು, ಇದು ಒಂಟೆಯು. ಇದಕ್ಕೆ ಬಾಯಿ, ಮೂಗು, ಕಣ್ಣು, ಕಿವಿ, ಶರೀರ ಹೀಗೆ ಐದು ಇಂದ್ರಿಯ ಗಳಿರುತ್ತವೆ. ನೀನು ಕೇಳುವ ಪಶುಗಳಿಗೆಲ್ಲ ಐದು ಇಂದ್ರಿಯಗಳೇ ಇರುವವು.

ವಾಮ.—ಇಲ್ಲಿ ಈ ಅಂದವಾದ ತೊಟ್ಟಿಯನ್ನು ಕಟ್ಟಿ ಅದ ರಲ್ಲಿ ಕೆಂಪು ಮೀನಗಳನ್ನು ಬಿಟ್ಟಿರುವರು. ಒಳಭಾಗದಲ್ಲಿ ಮೊಸಳೆಗ ಳಿರುವವು. ಆ ಎರಡನೇ ತೊಟ್ಟಿಯಲ್ಲಿ ಆವೆಗಳಿರುವವು. ಅವುಗಳಿಗೆ ಎಷ್ಟು ಇಂದ್ರಿಯಗಳಿರುತ್ತವೆ?

ರಾಮ.—ಅವುಗಳಿಗೂ ಐದು ಇಂದ್ರಿಯಗಳೇ ಇರುವವು. ಅವು ನೀರಿನಲ್ಲಿರುವದರಿಂದ ಇವುಗಳಿಗೆ ಜಲಚರ ಪಂಚೇಂದ್ರಿಯ ಗಳೆನ್ನುತ್ತಾರೆ. ಆನೆ, ಕುದುರೆ, ಎತ್ತು, ಎಮ್ಮೆ, ನಾಯಿ ಮೊದ ಲಾದವುಗಳು ನೆಲದ ಮೇಲೆ ವಾಸಿಸುವದರಿಂದ ಅವುಗಳಿಗೆ ಸ್ಥಲಚರ ಪಂಚೇಂದ್ರಿಯಗಳೆನ್ನುತ್ತಾರೆ. ಮತ್ತು ಆಚೇ ಬದಿಯ ಪಂಜರ ದಲ್ಲಿರುವ ಪಕ್ಷಿಗಳಿಗೆ ನಭಚರ ಪಂಚೇಂದ್ರಿಯಗಳೆನ್ನುತ್ತಾರೆ. ಗಿಳಿ, ಕೆಂಗುಬ್ಬಿ, ಬಿಳೀನವಿಲು, ಕಾಗೆ, ಕೋಗಿಲೆ ಮುಂತಾದ ಪಕ್ಷಿ ಗಳು ಯಾವಾಗಲೂ ಆಕಾಶದಲ್ಲಿ ಹಾರಾಡುತ್ತವೆ. ಅಂತೇ ಅವು ಗಳಿಗೆ ನಭಚರ ಪಂಚೇಂದ್ರಿಯಗಳೆನ್ನುತ್ತಾರೆ. ಇವುಗಳ ಮೇಲಿಂದ ತಿರ್ಯಂಚ ಪಂಚೇಂದ್ರಿ ಜೀವಗಳಲ್ಲಿ (೧) ಜಲಚರ ಜೀವ, (೨) ಸ್ಥಲಚರ ಜೀವ, (೩) ನಭಚರ ಜೀವ ಹೀಗೆ ಮೂರು ತರಗಳಾದವು.

ವಾಮ.—ಈ ತೋಟದಲ್ಲಿ ಪಂಚೇಂದ್ರಿಯ ತಿರ್ಯಂಚ ಜೀವಗಳೇ ಕಾಣುತ್ತವೆ. ಉಳಿದ ಇಂದ್ರಿಯುಗಳ ಜೀವಗಳು ಎಲ್ಲಿರುವವು?

ರಾಮ.—ಉಳಿದ ಇಂದ್ರಿಯುಗಳ ಜೀವಗಳೆಂದರೆ ಎರಡು ಮೂರು ನಾಲ್ಕು ಇಂದ್ರಿಯಗಳ ಜೀವಗಳನ್ನು ಹಿಡಿದು ತೋಟದಲ್ಲಿ ಇಡಲಿಕ್ಕೆ ಬರುವದಿಲ್ಲ ಮತ್ತು ಅವುಗಳನ್ನು ಕಾಯಲಿಕ್ಕೂ ಕಠಿಣವಾಗುತ್ತದೆ. ಈ ಮೂರು ತರದ ಜೀವಗಳಿಗೆ ವಿಕಲತ್ರಯ ಅನ್ನುತ್ತಾರೆ. (೧) ದ್ವೀಂದ್ರಿಯ, (೨) ತ್ರೀಂದ್ರಿಯ, (೩) ಚತುರಿಂದ್ರಿಯ, (೪) ಪಂಚೇಂದ್ರಿಯ. ಈ ನಾಲ್ಕು ಬಗೆಯ ಜೀವಗಳಿಗೆ ತ್ರಸಜೀವಗಳೆನ್ನುತ್ತಾರೆ.

ವಾಮ.—ಈ ಜೀವಗಳಿಗೆ ಮನಸ್ಸು ಇರುತ್ತದೋ?

ರಾಮ.-ಕೆಲವು ಪಂಚೇಂದ್ರಿಯ ಜೀವಗಳಲ್ಲಿ ಮಾತ್ರ ಮನಸ್ಸು ಇರುತ್ತದೆ. ಮನುಷ್ಯ, ದೇವರು, ನಾರಕಿ ಮತ್ತು ಪಂಚೇಂದ್ರಿಯ ತಿರ್ಯಂಚದಲ್ಲಿ ಸಿಂಹ, ನಾಯಿ, ಆನೆ, ಎತ್ತು, ಹಾವು, ಗಿಳಿ, ಪಾರಿವಾಳ, ಹಂದಿ ಮುಂತಾದ ಪಶುಗಳಿಗೆ ಮನಸ್ಸಿರುತ್ತದೆ. ಮನಸ್ಸಿದ್ದ ಪ್ರಾಣಗಳಿಗೆ ಒಳಿತುಹೀನಗಳ ವಿಚಾರವುಂಟು. ಅವು ಶಿಕ್ಷಣವನ್ನೂ ಉಪದೇಶವನ್ನೂ ಗ್ರಹಣಮಾಡುತ್ತವೆ. ಮನಸ್ಸುಳ್ಳ ಜೀವಗಳಿಗೆ ಸಂಜ್ಞೀ ಜೀವಗಳೆನ್ನುತ್ತಾರೆ.

ವಾಮ.—ಮನಸ್ಸಿಲ್ಲದ ಜೀವಗಳಾವವು?

ರಾಮ.—ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ ಮತ್ತು ಚತುರಿಂದ್ರಿಯ ಜೀವಗಳಿಗೆ ಮನಸ್ಸು ಇರುವದೇ ಇಲ್ಲ.

ಕೆಲವು ಪಂಚೇಂದ್ರಿಯ ತಿರ್ಯಗಂಚಗಳಿಗೂ ಮನಸ್ಸಿರುವದಿಲ್ಲ. ಮನಸ್ಸಿಲ್ಲದ ಜೀವಗಳಿಗೆ ಅಸಂಜ್ಞೀ ಜೀವಗಳೆನ್ನುತ್ತಾರೆ. ಅಸಂಜ್ಞೀ ಜೀವಗಳಿಗೆ ಒಳಿತುಹೀನಗಳು ತಿಳಿಯುವದಿಲ್ಲ ಮತ್ತು ಅವು ಶಿಕ್ಷಣವನ್ನೂ ಉಪದೇಶವನ್ನೂ ಗ್ರಹಣಮಾಡಲಾರವು.

ವಾಮ.—ಅಪ್ಪಾ ತಡವಾಯಿತು. ಇನ್ನೊಮ್ಮೆ ಕೂಡಿದಾಗ ಹೆಚ್ಚಿಗೆ ಹೇಳುವಿಯಂತೆ, ಈಗ ಮನೆಗೆ ಹೋಗೋಣ ನಡೆ.



## ೩೮ನೆಯ ಪಾಠ.

# ಸ್ಥಾವರ ಜೀವಗಳು.

ಸ್ಪರ್ಶನೇಂದ್ರಿಯವಷ್ಟೇ ಇದ್ದ ಜೀವಕ್ಕೆ ಸ್ಥಾವರ ಜೀವವೆನ್ನುತ್ತಾರೆ. ಇದರಲ್ಲಿ ಐದು ಪ್ರಕಾರಗಳುಂಟು. ಪೃಥ್ವಿಯೇ ಶರೀರವಾಗಿರುವ ಜೀವಗಳಿಗೆ ಪೃಥ್ವಿಕಾಯಿಕ ಜೀವಗಳೆನ್ನುತ್ತಾರೆ. ಉದಾ.—ಮಣ್ಣು, ಕಲ್ಲು, ಅಭ್ರಕ, ರತ್ನ, ಬಂಗಾರ, ಬೆಳ್ಳಿ ಮುಂತಾದ ಕಣಿಯೊಳಗಿಂದ ಹೊರಡುವ ಧಾತುಗಳು. ಆದರೆ ಉತ್ಪತ್ತಿ ಸ್ಥಾನದಿಂದ ಬೇರೆಯಾದವೆಂದರೆ ಬಹಳ ಮಾಡಿ ಈ ಪೃಥ್ವಿ ಶರೀರದಲ್ಲಿ ಜೀವವು ನಿಲ್ಲುವದಿಲ್ಲ.

ನೀರೇ ಶರೀರವಾಗಿರುವ ಜೀವಗಳಿಗೆ ಜಲಕಾಯಜೀವಗಳೆನ್ನುತ್ತಾರೆ. ಉದಾ.—ನೀರು.

ಅಗ್ನಿಯೇ ಶರೀರವಾಗಿರುವ ಜೀವಗಳಿಗೆ ಅಗ್ನಿಕಾಯ ಜೀವಗಳೆನ್ನುತ್ತಾರೆ.

ಉದಾ.—ದೀಪದ ಜ್ಯೋತಿ, ಬೆಂಕಿ, ಮಿಂಚು ಮುಂತಾದವುಗಳು.

ವಾಯುವೇ ಶರೀರವಾಗಿರುವ ಜೀವಗಳಿಗೆ ವಾಯುಕಾಯ ಜೀವಗಳೆನ್ನುತ್ತಾರೆ. ಉದಾ.—ಹವೆ.

ವನಸ್ಪತಿಗಳೇ ಶರೀರವಾಗಿರುವ ಜೀವಗಳಿಗೆ ವನಸ್ಪತಿಕಾಯ ಜೀವಗಳೆನ್ನುತ್ತಾರೆ. ಉದಾ.—ಗಿಡ, ಬಳ್ಳಿ, ಹಣ್ಣು, ಹೂವು ಮುಂತಾದವುಗಳು.

ಈ ಐದುಬಗೆಯ ಶರೀರಗಳನ್ನು ಧರಿಸುವ ಜೀವಗಳಲ್ಲಿ ಸ್ಥೂಲ (ಬಾದರ) ಮತ್ತು ಸೂಕ್ಷ್ಮ ಹೀಗೆ ಎರಡು ವಿಧಗಳಿರುವವು.

ಎರಡನೆಯವರಿಗೆ ತೊಂದರೆಗೊಳಿಸುವಂಥ ಮತ್ತು ಎರಡನೆಯವರಿಂದ ತೊಂದರೆಗೊಳ್ಳುವಂಥ ಜೀವಗಳಿಗೆ ಸ್ಥೂಲಜೀವಗಳೆನ್ನುತ್ತಾರೆ. ಸೂಕ್ಷ್ಮಜೀವಗಳು ಯಾವ ವಸ್ತುವಿಗೂ ಉಪದ್ರವನ್ನು ಕೊಡುವದಿಲ್ಲ ಮತ್ತು ಯಾವ ವಸ್ತುವಿನಿಂದಲೂ ಉಪಟಳವನ್ನು ಹೊಂದುವದಿಲ್ಲ.



## ೩೯ನೆಯ ಪಾಠ.

## ಗತಿ.

ಜೀವದ ವಿಶೇಷಸ್ಥಿತಿಗೆ ಗತಿ ಅನ್ನುತ್ತಾರೆ. ಗತಿಯಲ್ಲಿ (೧) ನರಕಗತಿ, (೨) ತಿರ್ಯಂಚಗತಿ, (೩) ಮನುಷ್ಯಗತಿ, (೪) ದೇವಗತಿ ಹೀಗೆ ನಾಲ್ಕು ಪ್ರಕಾರಗಳುಂಟು.

ನರಕಗತಿ.—ಈ ಪೃಥ್ವಿಯ ಬುಡದಲ್ಲಿ ಏಳು ನರಕಗಳಿರುವವು. ನರಕದಲ್ಲಿ ಬಹಳ ದುಃಖವಿರುತ್ತದೆ. ಅಲ್ಲಿರುವ ಜೀವಗಳಿಗೆ ಹಗಲಿರುಳು ಬಹಳೇ ದುಃಖವನ್ನು ಅನುಭವಿಸಬೇಕಾಗುತ್ತದೆ. ಒಂದು ಅರಗಳಿಗೆಯಾದರೂ ಸುಖವು ಸಿಗುವದಿಲ್ಲ; ಮನುಷ್ಯನಾಗಲೀ ಪಶುವಾಗಲೀ ಸತ್ತು ನರಕದಲ್ಲಿ ಜನ್ಮತಾಳುತ್ತದೆ. ಆಗ ಅದಕ್ಕೆ ನರಕಗತಿಯು ದೊರೆಯಿತೆನ್ನುತ್ತಾರೆ. ಈ ಗತಿಯೊಳಗಿನ ಜೀವಗಳಿಗೆ ಐದೂ ಇಂದ್ರಿಯಗಳು ಇರುತ್ತವೆ.

ತಿರ್ಯಂಚಗತಿ:—ಪಶು, ಪಕ್ಷಿ, ಇರಿವೆ, ಕಟ್ಟರಿವೆ ಮುಂತಾದ ಪ್ರಾಣಿಗಳಿಗೆ ತಿರ್ಯಂಚ ಪ್ರಾಣಿಗಳೆನ್ನುತ್ತಾರೆ. ಯಾವದೇ ಜೀವವು ಸತ್ತು ಈ ಗತಿಯಲ್ಲಿ ಜನ್ಮವೆತ್ತಿತೆಂದರೆ, ಅದಕ್ಕೆ ತಿರ್ಯಂಚಗತಿಯಲ್ಲಿ ಹುಟ್ಟಿತೆಂದು ಅನ್ನುತ್ತಾರೆ. ಈಗತಿಯಲ್ಲಿ ಐದೂ ಇಂದ್ರಿಯಗಳುಳ್ಳ ಜೀವಗಳ ಸಮಾವೇಶವಾಗುತ್ತದೆ.

ಮನುಷ್ಯಗತಿ:—ಯಾವದೇ ಜೀವವು ಸತ್ತ ಮೇಲೆ ಮನುಷ್ಯ ಶರೀರವನ್ನು ಧಾರಣಮಾಡಿತೆಂದರೆ ಅದಕ್ಕೆ ಮನುಷ್ಯಗತಿಯು ಪ್ರಾಪ್ತವಾಯಿತೆಂದು ಅನ್ನುತ್ತಾರೆ.

ದೇವಗತಿ:—ಮೇಲೆ ಹೇಳಿದ ಮೂರು ಬಗೆಯ ಜೀವಗಳ ಹೊರತು ಬೇರೆ ಜೀವಗಳ ನಾಲ್ಕನೆಯದೊಂದು ಬಗೆ ಇರುವದು. ಯಾರು ಎಷ್ಟೋ ಪ್ರಕಾರದ ಉತ್ತಮವಾದ ಭೋಗೋಪಭೋಗಗಳನ್ನು ಅನುಭವಿಸುತ್ತಾರೆ, ಯಾರ ಶರೀರವು ಸಪ್ತಧಾತುಗಳಿಂದ ವಿರಹಿತವಾಗಿ ದಿವ್ಯವಾಗಿರುವದೋ ಮತ್ತು ಯಾರು ಹಗಲಿ

ರುಳು ಸುಖದಲ್ಲಿ ಮಗ್ನರಾಗಿರುವರೋ ಅವರಿಗೆ ದೇವರೆನ್ನುತ್ತಾರೆ. ಇಂಥ ಸ್ಥಿತಿಯಲ್ಲಿ ಜನ್ಮಹೊಂದಿದವರಿಗೆ ದೇವಗತಿ ಪ್ರಾಪ್ತವಾಯಿತೆಂದು ಅನ್ನುತ್ತಾರೆ. ಈ ಗತಿಯೊಳಗಿನ ಜೀವಗಳು ಪಂಚೇಂದ್ರಿಯಗಳಿಂದ ಕೂಡಿರುತ್ತವೆ.



## ೪೦ನೆಯ ಪಾಠ.

## ಹತ್ತು ಪ್ರಾಣಗಳು.

ಸಂಸಾರೀ ಜೀವವು ಯಾವದರಿಂದ ಬದುಕುತ್ತದೋ ಅದಕ್ಕೆ ಪ್ರಾಣವೆನ್ನುತ್ತಾರೆ. ಪ್ರಾಣದಲ್ಲಿ ಮುಖ್ಯವಾಗಿ(೧) ಇಂದ್ರಿಯ, (೨) ಬಲ,(೩) ಆಯುಷ್ಯ, (೪) ಶ್ವಾಸೋಚ್ಛ್ವಾಸ ಹೀಗೆ ನಾಲ್ಕು ವಿಧಗಳುಂಟು. ಇವುಗಳ ಉಪಭೇದಗಳು (೧) ಒಂದು ಇಂದ್ರಿಯ, (೨) ಎರಡು ಇಂದ್ರಿಯ, (೩) ಮೂರು ಇಂದ್ರಿಯ, (೪) ನಾಲ್ಕು ಇಂದ್ರಿಯ, (೫) ಪಂಚೇಂದ್ರಿಯ, (೬) ಕಾಯ ಬಲ, (೭) ಮನೋಬಲ, (೮) ವಚನಬಲ, (೯) ಶ್ವಾಸೋಚ್ಛ್ವಾಸ, (೧೦) ಆಯು ಹೀಗೆ ಹತ್ತು ಪ್ರಕಾರಗಳಿರುವವು. ಜೀವವು ಕೆಲವುಕಾಲ ಒಂದು ಶರೀರದಲ್ಲಿ ತೊಡಕಿಕೊಂಡಿರುವದಕ್ಕೆ ಆಯುಷ್ಯವೆನ್ನುತ್ತಾರೆ. ಬಲವೆಂದರೆ ಕೆಲಸ ಮಾಡುವ ಶಕ್ತಿಯು. ಜೀವದ ಗುರುತು ಯಾವ ಅವಯುವಗಳಿಂದ ಆಗುತ್ತದೋ ಅವುಗಳಿಗೆ ಇಂದ್ರಿಯುಗಳೆನ್ನುತ್ತಾರೆ. ಗಾಳಿಯನ್ನು ಶರೀರದಲ್ಲಿ ತೆಗೆದುಕೊಳ್ಳುವದಕ್ಕೆ ಶ್ವಾಸವೆಂತಲೂ, ಗಾಳಿಯನ್ನು

ಹೊರಗೆ ಬಿಡುವದಕ್ಕೆ ಉಚ್ಛ್ವಾಸವೆಂತಲೂ ಅನ್ನುತ್ತಾರೆ. ಆಯುಃಪ್ರಾಣ, ಬಲಪ್ರಾಣ, ಇಂದ್ರಿಯಪ್ರಾಣ, ಶ್ವಾಸೋಚ್ಛ್ವಾಸಪ್ರಾಣ ಹೀಗೆ ಈ ನಾಲ್ಕು ಮುಖ್ಯ ಪ್ರಾಣಗಳು ಸಂಸಾರೀ ಜೀವಿಗೆ ಇರುತ್ತವೆ. ಅಂತೇ ಜೀವವಂತತನವು ಕಂಡುಬರುತ್ತದೆ. ಏಕೇಂದ್ರಿಯ ಸ್ಥಾವರ ಜೀವಕ್ಕೆ ಆಯು, ಶರೀರಬಲ, ಸ್ಪರ್ಶನೇಂದ್ರಿಯ, ಶ್ವಾಸೋಚ್ಛ್ವಾಸ ಹೀಗೆ ನಾಲ್ಕು ಪ್ರಾಣಗಳಿರುತ್ತವೆ. ದ್ವೀಂದ್ರಿಯ ತ್ರಸಜೀವಕ್ಕೆ ಆಯು, ಶರೀರಬಲ, ವಚನಬಲ, ಸ್ಪರ್ಶನೇಂದ್ರಿಯ, ರಸನೇಂದ್ರಿಯ, ಶ್ವಾಸೋಚ್ಛ್ವಾಸ ಹೀಗೆ ಆರು ಪ್ರಾಣಗಳಿರುತ್ತವೆ. ತ್ರೀಂದ್ರಿಯ ಜೀವಕ್ಕೆ ಆಯು, ಶರೀರಬಲ, ವಚನಬಲ, ಸ್ಪರ್ಶನೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಶ್ವಾಸೋಚ್ಛ್ವಾಸ ಹೀಗೆ ಏಳು ಪ್ರಾಣಗಳಿರುತ್ತವೆ. ಚತುರಿಂದ್ರಿಯ ಜೀವಕ್ಕೆ ಆಯು, ಶರೀರಬಲ, ವಚನಬಲ, ಸ್ಪರ್ಶನೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಶ್ವಾಸೋಚ್ಛ್ವಾಸ ಹೀಗೆ ಎಂಟು ಪ್ರಾಣಗಳಿರುತ್ತವೆ. ಅಸಂಜ್ಞೀ ಪಂಚೇಂದ್ರಿಯ ಜೀವಕ್ಕೆ ಆಯು, ಶರೀರಬಲ, ವಚನಬಲ, ಸ್ಪರ್ಶನೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಶ್ರೋತ್ರೇಂದ್ರಿಯ, ಶ್ವಾಸೋಚ್ಛ್ವಾಸ ಹೀಗೆ ಒಂಭತ್ತು ಪ್ರಾಣಗಳಿರುತ್ತವೆ. ಸಂಜ್ಞೀ ಪಂಚೇಂದ್ರಿಯ ಜೀವಕ್ಕೆ ಆಯು, ಶರೀರಬಲ, ವಚನಬಲ, ಸ್ಪರ್ಶನೇಂದ್ರಿಯ ರಸನೇಂದ್ರಿಯ ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಶ್ರೋತ್ರೇಂದ್ರಿಯ, ಶ್ವಾಸೋಚ್ಛ್ವಾಸ, ಮನಸ್ಸು ಹೀಗೆ ಹತ್ತು ಪ್ರಾಣಗಳಿರುತ್ತವೆ.

---

## ೪೧ನೆಯ ಪಾಠ.

# ಬೇಟೆಗಾರ ಬ್ರಹ್ಮದತ್ತನ ಕಥೆ.

ಜಯಂತದೇಶದಲ್ಲಿ ಉಜ್ಜೈನ ಎಂಬ ಹೆಸರಿನ ಗ್ರಾಮ ವಿತ್ತು. ಅಲ್ಲಿಯ ಅರಸನ ಹೆಸರು ಬ್ರಹ್ಮದತ್ತ. ಅವನು ಕ್ರೂರನೂ ಅಧಾರ್ಮಿಕನೂ ಆಗಿದ್ದನು. ಅವನಿಗೆ ಬೇಟೆಯಾಡುವ ಚಟವಿತ್ತು. ಅವನು ಬೇಟೆಯಾಡದೆ, ಒಂದೂ ದಿವಸವನ್ನು ಕಳೆಯುತ್ತಿದ್ದಿಲ್ಲ.

ಒಂದು ದಿವಸ ಬ್ರಹ್ಮದತ್ತನು ಬೇಟೆಯಾಡಬೇಕೆಂದು ಕಾಡಿಗೆ ಹೋಗಿದ್ದನು. ಆ ಕಾಡಿನಲ್ಲಿ ಓರ್ವ ಮುನಿವರ್ಯರು ಧ್ಯಾನಸ್ಥ ರಾಗಿ ಒಂದು ಕಲ್ಲುಹಾಸಿಗೆಯ ಮೇಲೆ ಕುಳಿತಿದ್ದರು. ಧರ್ಮದ ಮೇಲೆ ರಾಜನ ಪ್ರೇಮವಿಲ್ಲದ್ದರಿಂದ ಅವನು ಮುನಿಗಳನ್ನು ನಮಸ್ಕ ರಿಸದೆ ಹಾಗೇ ಬೇಟೆಯಾಡಲು ಹೊರಟುಹೋದನು. ಈ ಹೊತ್ತು ಮುನಿಗಳ ಪ್ರಭಾವದಿಂದ ತನಗೆ ಬೇಟೆಯು ದೊರೆಯಲಿಲ್ಲವೆಂದು ರಾಜನು ಮನಸ್ಸಿನಲ್ಲಿ ಮರಮರ ಮರುಗಿದನು. ಮರುದಿವಸವಾ ದರೂ ಬೇಟೆಯು ಸಿಗಲಿಲ್ಲ. ಮುಂದೆ ಮೂರು ನಾಲ್ಕು ದಿನಗಳ ವರೆಗೆ, ಬೇಟೆಯು ಸಿಗದ್ದರಿಂದ ಅವನು ಆ ಕಾಡಿನಲ್ಲಿರುವ ಮುನಿಗಳ ಮೇಲೆ ಸಿಟ್ಟಾದನು; ಮತ್ತು ಆ ಮುನಿಗಳನ್ನು ಕಾಡಿನಿಂದ ಓಡಿಸಬೇಕೆಂದು, ಅವರು ಇಲ್ಲದ ಹೊತ್ತನ್ನು ಸಾಧಿಸಿ, ಅವರು ಕೂಡ್ರುವ ಹಾಸುಗಲ್ಲಿನ ಕೆಳಗೆ ಉರಿಹಚ್ಚಿ, ಆ ಕಲ್ಲನ್ನು ಒಳಿತಾಗಿ ಕಾಸಿದನು. ಅದು ತಪ್ತವಾದ ಬಳಿಕ ರಾಜನು ಅಲ್ಲಿಂದ ಮರೆಯಾ ದನು. ಅಷ್ಟರಲ್ಲಿ ಆಹಾರದ ಸಲುವಾಗಿ, ಊರಲ್ಲಿ ಹೋದ ಮುನಿ

ಗಳು ಮರಳಿಬಂದರು. ಅವರು ಕಾಯ್ದ ಶಿಲೆಯನ್ನು ಕಂಡು, ಇದೊಂದು ಉಪಸರ್ಗವು ಬಂತೆಂದು ಭಾವಿಸಿ, ಹಾಗೇ ಆ ಕಲ್ಲಿನ ಮೇಲೆ ಧ್ಯಾನಸ್ಥರಾಗಿ ಕುಳಿತುಕೊಂಡರು. ಕಲ್ಲು ಬಹಳೇ ಕಾಯ್ದದ್ದರಿಂದ ಮುನಿಗಳ ಶರೀರವು ಸುಡಹತ್ತಿತು. ಆದರೂ ಅವರು ಧ್ಯಾನವನ್ನು ಬಿಡಲಿಲ್ಲ. ಅದರಿಂದ ಅವರಿಗೆ ಕೇವಲಜ್ಞಾನವು ಪ್ರಾಪ್ತವಾಗಿ ಅವರು ಮೋಕ್ಷವನ್ನು ಪಡೆದರು.

ಇತ್ತ ಬ್ರಹ್ಮದತ್ತನಿಗೆ ಸಾಧುತಾಪದೋಷದಿಂದ ಏಳನೇ ದಿವಸವೇ ಗಲತ್ ಕುಷ್ಟರೋಗವುಂಟಾಗಿ, ಶರೀರದಿಂದ ದುರ್ಗಂಧವು ಹೊರಬೀಳಹತ್ತಿತು. ಮುಂದೆ ಬಹಳ ಕಷ್ಟವನ್ನು ಅನುಭವಿಸಿ, ಸತ್ತು ಏಳನೇ ನರಕದಲ್ಲಿ ಹುಟ್ಟಬಂದನು. ಅಲ್ಲಿಯೂ ಛೇದನ, ಭೇದನ ಮೊದಲಾದ ಹಲವು ದುಃಖಗಳನ್ನು ಅನುಭವಿಸಿದನು.

ನರಕದೊಳಗಿನ ಆಯುಷ್ಯವು ತೀರಿದಬಳಿಕ ಆ ಜೀವವು ಒಬ್ಬ ಜಾಲಗಾರನ ಹೊಟ್ಟೆಯಲ್ಲಿ ಹುಡಿಗೆಯಾಗಿ ಹುಟ್ಟಬಂತು. ಮೊದಲಿನ ಪಾಪಕರ್ಮದ ಮೂಲಕ ಅವಳ ಶರೀರವು ಬಹಳ ದುರ್ಗಂಧಯುಕ್ತವಾಗಿತ್ತು. ಅದರಿಂದ ಅವಳು ಮನೆಯ ಜನರಿಗೆಲ್ಲ ಬೇಸರದ ವಿಷಯವಾದಳು. ಅವರು ಅವಳನ್ನು ಒಂದು ಕಾಡಿನಲ್ಲಿ ಬಿಟ್ಟುಬಂದರು. ಅಲ್ಲಿ ಆ ಅನಾಥ ಹುಡಿಗೆಯು ತನ್ನ ಕರ್ಮದ ಫಲವನ್ನು ಉಣ್ಣುತ್ತ ಇದ್ದಳು.

ಒಂದಾನೊಂದು ದಿವಸ ಅರ್ಜಿಕಾ ಸ್ತ್ರೀಯರ ಸಂಘವು ಆ ಕಾಡಿಗೆ ಬಂತು. ಆಗ ಆ ಹುಡಿಗೆಯು ಅರ್ಜಿಕೆಯರನ್ನು

ಆರ್ಚಿಸಿ, ತನ್ನ ದುಃಖನಿವಾರಣದ ಉಪಾಯವನ್ನು ಕೇಳಿದಳು. ಆಗ ಮುಖ್ಯ ಅರ್ಜಿಕೆಯು ಅವಳಿಗೆ ಧರ್ಮದ ಸ್ವರೂಪವನ್ನು ತಿಳಿ ಹೇಳಿ, ಶ್ರಾವಕರ ವ್ರತವನ್ನು ಕೊಟ್ಟಳು. ಪಾಪದ ಉದಯವು ಇನ್ನೂ ಇದ್ದದರಿಂದ ಸಿಂಹವು ಅವಳನ್ನು ತಿಂದುಬಿಟ್ಟಿತು. ಅವಳು ಕುಬೇರದತ್ತ ಸೆಟ್ಟಿಯ ಹೊಟ್ಟೆಯಲ್ಲಿ ಹುಡಿಗೆಯಾಗಿ ಹುಟ್ಟಿ ಬಂದಳು. ಇಷ್ಟಾದರೂ ಅವಳ ಮೈಯ ದುರ್ವಾಸನೆಯು ಅಡಗ ಲಿಲ್ಲ. ಒಂದುದಿವಸ ಕುಬೇರನು ಮುನಿಗಳಿಗೆ, ತನ್ನ ಮಗಳ ಮೈಗೆ ದುರ್ಗಂಧ ಬರುವ ಕಾರಣವೇನೆಂದು ಕೇಳಿದನು. ಆಗ ಮುನಿಗಳು ಯಾವಾಗಲೂ ಬೇಟೆಯನ್ನಾಡಿ, ಪ್ರಾಣಹಿಂಸೆ ಮಾಡಿದ್ದರಿಂದಲೂ, ಮುನಿಗಳನ್ನು ಕಾಡಿದ್ದರಿಂದಲೂ ಹೀಗಾಗಿದೆ ಎಂದು ಹೇಳಿ, ಅವಳ ಜನ್ಮಾಂತರದ ಕಥೆಯನ್ನು ಹೇಳಿದರು. ಅದನ್ನು ಕೇಳಿ, ಆ ಹುಡಿಗೆಗೆ ಜಾತಿಸ್ಮರಣವಾಗಿ ಬಹಳ ಪಶ್ಚಾತ್ತಾಪವಾಯಿತು. ಆಗ ಅವಳು ಪಾಪಪರಿಹಾರಾರ್ಥವಾಗಿ, ಮುನಿಗಳ ಬಳಿಯಲ್ಲಿ ಆರು ರಸಗಳ ತ್ಯಾಗಮಾಡುವ ವ್ರತವನ್ನು ಕೈಕೊಂಡಳು. ಆ ವ್ರತವನ್ನು ಭಕ್ತಿ ಯಿಂದ ಸರಿಯಾಗಿ ಪಾಲಿಸಿದ್ದರಿಂದ ಅವಳು ಪಾಪಮುಕ್ತಳಾಗಿ, ಕೊನೆಗೆ ದೇವತೆಯಾಗಿ ಸ್ವರ್ಗಸುಖವನ್ನು ಅನುಭೋಗಿಸಹತ್ತಿದಳು.

---

